ಕರ್ನಾಟಕ  ಸರ್ಕಾರ

ಸಾರ್ವಜನಿಕ ಶಿಕ್ಷಣ ಇಲಾಖೆ

# ಕರ್ನಾಟಕ ಸಂಗೀತ

## ಮಾಧ್ಯಮಿಕ ಹಂತ (ಸೀನಿಯರ್ ಗ್ರೇಡ್)

**ಪಠ್ಯಪುಸ್ತಕ ನಿರ್ದೇಶನಾಲಯ**

ಬಿ.ಪಿ. ವಾಡಿಯಾ ರಸ್ತೆ, ಬಸವನಗುಡಿ, ಬೆಂಗಳೂರು - 560 004.




ಸಾರ್ವಜನಿಕ ಶಿಕ್ಷಣ ಇಲಾಖೆ



# ಕರ್ನಾಟಕ ಸಂಗೀತ

## ಮಾಧ್ಯಮಿಕ ಹಂತ (ಸೀನಿಯರ್ ಗ್ರೇಡ್)
## (ಪರಿಷ್ಕೃತ ಪಠ್ಯವಸ್ತುವಿಗನುಗುಣವಾಗಿ)

ಬೆಂಗಳೂರು

2002

| | | |
|---|---|---|
| 1. ಶೀರ್ಷಿಕೆ | – | ಕರ್ನಾಟಕ ಸಂಗೀತ |
| 2. ಪ್ರಕಟಣೆ ಹಕ್ಕುಗಳು | – | ನಿರ್ದೇಶಕರು, ಪಠ್ಯ ಪುಸ್ತಕ ನಿರ್ದೇಶನಾಲಯ<br>ಬಿ.ಪಿ. ವಾಡಿಯಾ ರಸ್ತೆ, ಬಸವನಗುಡಿ,<br>ಬೆಂಗಳೂರು - 560 004. |
| 3. ಮುದ್ರಣ | – | 2002 |
| 4. ಮುದ್ರಿತ ಪ್ರತಿಗಳ ಸಂಖ್ಯೆ | – | 5000 |
| 5. ಮುದ್ರಣ ಕಾಗದದ ಬಳಕೆ | – | 80 ಜಿ.ಎಸ್.ಎಂ. ಮ್ಯಾಪ್‌ಲಿಥೋ |
| 6. ಪುಸ್ತಕದ ಬೆಲೆ | | Rs 120- |
| 7. ಡಿ.ಟಿ.ಪಿ. | – | ಶ್ರೀ ಬಾಲಾಜಿ ಲೇಸರ್ ಗ್ರಾಫಿಕ್ಸ್<br>ಬಸವೇಶ್ವರನಗರ, ಬೆಂಗಳೂರು-560079. |
| 8. ಮುದ್ರಕರು | – | ಶ್ರೀ ಬಾಲಾಜಿ ಟ್ರೇಡರ್ಸ್<br>ಕಾಟನ್‌ಪೇಟೆ, ಬೆಂಗಳೂರು. |

## ಮುನ್ನುಡಿ

ನಮ್ಮ ನಾಡಿನಲ್ಲಿ ಉತ್ಕೃಷ್ಟವಾದ ಸಾಂಸ್ಕೃತಿಕ ಪರಂಪರೆ ಇದ್ದು ಈ ಎಲ್ಲಾ ಕ್ಷೇತ್ರದಲ್ಲೂ ಸಂಗೀತ ವ್ಯಾಪಕವಾಗಿರುವುದು ಸರ್ವವೇದ್ಯವಾಗಿದೆ. ಇಂತಹ ಒಂದು ಪರಂಪರೆಯನ್ನು ಉಳಿಸಿ, ಬೆಳೆಸುವುದು ಪ್ರತಿ ನಾಗರೀಕನ ಕರ್ತವ್ಯ. ಈ ದಿಸೆಯಲ್ಲಿ ಕರ್ನಾಟಕ ಘನ ಸರ್ಕಾರವು ಹೆಚ್ಚು ಗಮನಹರಿಸಿ ಈ ಕ್ಷೇತ್ರಗಳಲ್ಲಿ ರಾಜ್ಯದ ಯುವ ಪೀಳಿಗೆಯನ್ನು ತೊಡಗಿಸಲು ಪಠ್ಯಪುಸ್ತಕಗಳನ್ನು ರಚಿಸಿ, ಸರಬರಾಜು ಮಾಡಲು ಏರ್ಪಾಡು ಮಾಡಿರುವುದು ನಮ್ಮೆಲ್ಲರ ಹೆಮ್ಮೆಯ ವಿಷಯವಾಗಿದೆ.

ವಿಶೇಷ ಸಂಗೀತ, ನೃತ್ಯ, ತಾಳವಾದ್ಯ ವಿಷಯಗಳಲ್ಲಿ 1993ರ ಪರಿಷ್ಕೃತ ಪಠ್ಯವಸ್ತುವನ್ನು ಆಧರಿಸಿದ ಜೂನಿಯರ್ (ಪ್ರಾಥಮಿಕ) ಹಂತದ ಪಠ್ಯಪುಸ್ತಕಗಳನ್ನು ಪಠ್ಯಪುಸ್ತಕ ನಿರ್ದೇಶನಾಲಯವು ರಚಿಸಿ ರಾಜ್ಯಾದ್ಯಂತ ಬೋಧಕರಿಗೂ, ವಿದ್ಯಾರ್ಥಿಗಳಿಗೂ ದೊರಕುವಂತೆ ಈಗಾಗಲೇ ಸರಬರಾಜು ಮಾಡಿದೆ. ಈ ಪಠ್ಯಪುಸ್ತಕಗಳ ಗುಣಮಟ್ಟಕ್ಕೆ ಸರಿದೂಗುವಂತೆ ಸೀನಿಯರ್ (ಮಾಧ್ಯಮಿಕ) ಹಂತದ ಪಠ್ಯಪುಸ್ತಕಗಳನ್ನು ಈಗ ರಚಿಸಿ ಇಲಾಖೆಯು ಸಾರ್ವಜನಿಕ ಶಿಕ್ಷಣದ ಸೇವೆಯಲ್ಲಿ ಸಮರ್ಪಿಸಿದೆ. ಪಠ್ಯಪುಸ್ತಕಗಳ ರಚನಾಕಾರ್ಯವು ಕರ್ನಾಟಕ ರಾಜ್ಯದ ಹಾಗೂ ನೆರೆ ರಾಜ್ಯಗಳ ಹೆಸರಾಂತ ಪರಿಣತರ ಸಹಕಾರದಿಂದ ನಡೆದಿದೆ. ಈ ಪಠ್ಯಪುಸ್ತಕಗಳ ಉಪಯೋಗದಲ್ಲಿ ವಿದ್ಯಾರ್ಥಿಗಳು, ಬೋಧಕರು, ಪೋಷಕರು, ಹಾಗೂ ಸಂಗೀತ ಪ್ರೇಮಿಗಳ ಸಹಕಾರ ದೊರೆಯುವುದೆಂದು ಆಶಿಸಲಾಗಿದೆ.

ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ಸಂಗೀತ, ನೃತ್ಯ, ತಾಳವಾದ್ಯಗಳ ಪರಿಷ್ಕೃತ ಪಠ್ಯವಸ್ತುವಿಗನುಸಾರ ರಚಿಸಲಾಗಿರುವ ಪಠ್ಯಪುಸ್ತಕಗಳನ್ನು ನಿಗದಿಪಡಿಸಿ ಪರೀಕ್ಷೆಗಳನ್ನು ನಡೆಸುವುದರಲ್ಲಿ ಅವರ ಸಹಕಾರ ಪ್ರಶಂಸನೀಯ. ಪ್ರಶಂಸನೀಯ.

ವಿಶೇಷ ಸಂಗೀತ, ನೃತ್ಯ, ತಾಳವಾದ್ಯ ಒಟ್ಟು 8 ವಿಷಯಗಳ 8 ಪಠ್ಯಪುಸ್ತಕಗಳನ್ನು ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಸಿದ್ಧಪಡಿಸಿದೆ.

1. ಕರ್ನಾಟಕ ಸಂಗೀತ
2. ಕರ್ನಾಟಕ ತಾಳವಾದ್ಯ (ಲಯವಾದ್ಯ)
3. ಹಿಂದೂಸ್ತಾನಿ ಸಂಗೀತ - ಸ್ವರವಾದ್ಯ
4. ಹಿಂದೂಸ್ತಾನಿ - ತಬಲಾ
5. ಭರತನಾಟ್ಯ
6. ಕಥಕ್ ನೃತ್ಯ
7. ಕೂಚಿಪೂಡಿ ನೃತ್ಯ
8. ಕಥಕಳಿ ನೃತ್ಯ

ತಮ್ಮ ಪರಿಣತೆಯನ್ನು ಸಾರ್ವಜನಿಕರ ಸೇವೆಯಲ್ಲಿ ತೊಡಗಿಸಿ ಇಲಾಖೆಯ ಕಾರ್ಯದಲ್ಲಿ ನೆರವಾದ ಕರ್ನಾಟಕ ರಾಜ್ಯದ ಹಾಗೂ ನೆರೆ ರಾಜ್ಯಗಳ ಕಲಾವಿದ ಪರಿಣತರನ್ನು ಇಲಾಖೆಯು ಅಭಿನಂದಿಸುತ್ತದೆ. ಈ ಪಠ್ಯಪುಸ್ತಕಗಳ ಮುದ್ರಣಕಾರ್ಯದಲ್ಲಿ ಆಸಕ್ತಿವಹಿಸಿ ನೆರವಾದ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೆ ಇಲಾಖೆಯ ಅಭಿನಂದನೆಗಳು. ಪಠ್ಯಪುಸ್ತಕಗಳು ಹೊರಬರಲು ಶ್ರಮಿಸಿದ ಸಮನ್ವಯಾಧಿಕಾರಿ, **ಶ್ರೀಮತಿ ಎಂ. ರುಕ್ಮಿಣಿಯಮ್ಮ** ಅವರಿಗೆ ನಿರ್ದೇಶನಾಲಯದ ಕೃತಜ್ಞತೆಗಳು. ಈ ಕಾರ್ಯದಲ್ಲಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ಇಲಾಖೆಯ ಅಭಿನಂದನೆಗಳು.

ನಿರ್ದೇಶಕರು

ಪಠ್ಯಪುಸ್ತಕ ನಿರ್ದೇಶನಾಲಯ

ಬಸವನಗುಡಿ, ಬೆಂಗಳೂರು - 4

## ಪಠ್ಯಪುಸ್ತಕ ರಚನಾ ಸಮಿತಿ

ಸಂಗೀತ ಕಲಾರತ್ನ, ಸಂಗೀತ ಕಲಾನಿಧಿ

1. ಶ್ರೀ ಆರ್. ಕೆ. ಶ್ರೀಕಂಠನ್ — ಅಧ್ಯಕ್ಷರು
   ನಂ. 4, ಪುಟ್ಟ ರಂಗಣ್ಣ ಲೇಔಟ್,
   ಶೇಷಾದ್ರಿಪುರಂ, ಬೆಂಗಳೂರು - 560 020.

2. ಶ್ರೀ ಎಂ. ಜೆ. ಶ್ರೀನಿವಾಸ ಅಯ್ಯಂಗಾರ್ — ಸದಸ್ಯರು
   ನಂ. 4/A, 4ನೇ ಮೈನ್, ಜಯನಗರ,
   ಮೈಸೂರು - 570 014.

3. ಶ್ರೀಮತಿ ಟಿ. ಶಾರದ — ಸದಸ್ಯರು
   ನಂ. 63, 1ನೇ ಡಿ ಕ್ರಾಸ್, ರೆಂಕೋ ಲೇಔಟ್,
   ವಿಜಯನಗರ 2ನೇ ಸ್ಟೇಜ್,
   ಬೆಂಗಳೂರು - 560 040.

4. ರುದ್ರಪಟ್ಟಂ ಶ್ರೀ ಎಸ್. ರಮಾಕಾಂತ್ — ಸದಸ್ಯರು
   ನಂ. 4, ಪುಟ್ಟ ರಂಗಣ್ಣ ಲೇಔಟ್,
   ಶೇಷಾದ್ರಿಪುರಂ, ಬೆಂಗಳೂರು - 560 020.

5. ಶ್ರೀಮತಿ ವಸಂತ ಮಾಧವಿ — ಪರಿಶೀಲಕರು
   ನಂ. 75, ಪಲ್ಲವಿ, 7ನೇ ಕ್ರಾಸ್, ITI ಲೇಔಟ್,
   J.P. ನಗರ, 1ನೇ ಫೇಸ್, ಬೆಂಗಳೂರು - 78.

### ವಿಶೇಷ ಆಹ್ವಾನಿತರು

1. ಶ್ರೀ. ಎಂ. ಎ. ನರಸಿಂಹಾಚಾರ್ — ಶಾಸ್ತ್ರಜ್ಞರು
2. ಶ್ರೀ. ಎಂ. ಆರ್. ದೊರೆಸ್ವಾಮಿ — ಕೊಳಲು ವಾದಕರು
3. ಶ್ರೀ. ಎ. ವೀರಭದ್ರಯ್ಯ — ಪಿಟೀಲು ವಾದಕರು
4. ಶ್ರೀ. ಎಸ್. ಶೇಷಗಿರಿ ರಾವ್ — ಪಿಟೀಲು ವಾದಕರು
5. ಶ್ರೀ. ಕೋದಂಡರಾಮ್ — ನಾಗಸ್ವರ ವಾದಕರು
6. ಶ್ರೀ. ಎ.ಪಿ. ಸರ್ವೋತ್ತಮ — ಕೊಳಲು ವಾದಕರು
7. ಶ್ರೀಮತಿ. ಎಂ. ರುಕ್ಮಿಣಿಯಮ್ಮ — ಸಮನ್ವಯಾಧಿಕಾರಿ
   ನಿವೃತ್ತ ಸಹಾಯಕ ನಿರ್ದೇಶಕರು,
   ಪಠ್ಯಪುಸ್ತಕ ನಿರ್ದೇಶನಾಲಯ,
   ಬೆಂಗಳೂರು.
8. ಶ್ರೀಮತಿ. ಛಾಯಾದೇವಿ — ಸಂಚಾಲಕರು
   ಸಹಾಯಕ ನಿರ್ದೇಶಕರು,
   ಪಠ್ಯಪುಸ್ತಕ ನಿರ್ದೇಶನಾಲಯ,
   ಬೆಂಗಳೂರು.
9. ಶ್ರೀ ಕೆ. ಆರ್. ಶ್ರೀನಿವಾಸ್ — ಕಲಾಕಾರರು.
10. ಶ್ರೀ ಗುರುಮೂರ್ತಿ ಹೆಗ್ಗಡೆ — ಛಾಯಾಚಿತ್ರಕಾರರು.

## ಪೀಠಿಕೆ

### ಸಂಗೀತ ಕಲೆ :

ಭಾರತವನ್ನು ಸಂಗೀತದ ನಾಡೆಂದು ಕರೆಯುವುದುಂಟು. ಕಾರಣ ಸಂಗೀತವು ನಮ್ಮ ರಾಷ್ಟ್ರ ಜೀವನದ ಮುಖ್ಯ ಭಾಗವಾಗಿದೆ. ಸಂಗೀತ, ನೃತ್ಯ ಮತ್ತು ನಾಟಕಾದಿ ಕಲೆಗಳು ಪ್ರಾಚೀನಕಾಲದಿಂದಲೂ ಶ್ರೇಷ್ಠತೆಯನ್ನು ಪಡೆದು ನಡೆದು ಬರುತ್ತಿದೆ. ಹಿಂದಿನಿಂದಲೂ, ಮುಂದಕ್ಕೂ ಕಲಾಭಿವೃದ್ಧಿಗೆ ಸ್ವಾತಂತ್ರ್ಯವಿದ್ದುದನ್ನೂ ಮತ್ತು ಇರುವುದನ್ನೂ ಕಾಣುತ್ತೇವೆ. ಲಕ್ಷಣದ ಭಾರದಿಂದ ಲಕ್ಷ್ಯವು ಕುಂದಿಲ್ಲ. ಸಂಗೀತ ತ್ರಿಮೂರ್ತಿಗಳ ಅಮೋಘ ರಚನೆಗಳು ಸಂಗೀತ ಕಲೆಯ ಮತ್ತು ಶಾಸ್ತ್ರದ ಹೊಸ ಲಕ್ಷಣಗಳನ್ನು ರೂಪಿಸಿವೆ. ಒಂದು ರಾಷ್ಟ್ರದ ಪ್ರಗತಿಯು ಕಲೆಗಳನ್ನು ಅವಲಂಬಿಸಿದೆ. ಚಿತ್ರ, ಶಿಲ್ಪ, ಸಾಹಿತ್ಯಾದಿ ಕಲೆಗಳು ಸಾಧಿಸಲಾರದ್ದನ್ನು ಸಂಗೀತ ಕಲೆಯು ಸಾಧಿಸುತ್ತದೆ. ಮನುಷ್ಯನು ಸುಸಂಸ ತನೆಂದರೆ ಅವನಲ್ಲಿ ಕಲೆಗಳ ಅರಿವಿದೆ ಎಂದರ್ಥ. ಕಲೆಯಿಂದ ಮಾನವ, ಮಾನವನಿಂದ ಕಲೆ. ಕಲೆ ವಿಶ್ವವ್ಯಾಪಕವಾದುದು. ಇದು ಶಾಸ್ತ್ರ ಪ್ರಕ್ರಿಯೆಯಿಂದ ಉತಷ್ಟತೆಯನ್ನೂ ಭದ್ರತೆಯನ್ನೂ ಪಡೆಯುತ್ತದೆ.

### ಪುಸ್ತಕ ರಚನೆಯ ಉದ್ದೇಶ :

ಯಾವುದೇ ವಿದ್ಯಾಭ್ಯಾಸದಲ್ಲಿ ವಿದ್ಯಾರ್ಥಿ - ಗುರು ಮತ್ತು ಶಿಕ್ಷಣ ವ್ಯವಸ್ಥೆ ಈ ಮೂರು ಅಂಶಗಳು ಪ್ರಧಾನ. ವಿದ್ಯಾಭ್ಯಾಸದ ಶ್ರೇಣಿಯು (ಗ್ರೇಡ್) ಹೆಚ್ಚಿದಂತೆ ವಿದ್ಯಾರ್ಥಿಯು ಗ್ರಹಿಸಬೇಕಾದ ವಿಷಯಗಳೂ ಹೆಚ್ಚುತ್ತವೆ. ವಿದ್ಯಾಭ್ಯಾಸದಲ್ಲಿ ನಿರ್ದಿಷ್ಟ ಗುರಿ ಇರಬೇಕಾದದ್ದು ಅಗತ್ಯ. ಅಂತೆಯೇ ಶಿಕ್ಷಣ ಸಾಮರ್ಥ್ಯವೂ ಹೊಂದಿಕೊಂಡಿರಬೇಕು. ಅದಕ್ಕಾಗಿ ಈ ಪಠ್ಯಪುಸ್ತಕ. ಪ್ರಾಥಮಿಕ ಹಂತದಲ್ಲಿ ಸಂಗೀತಕಲೆಯ ಬಗ್ಗೆ ಸಾಮಾನ್ಯ ಪರಿಚಯ ಮಾಡಿಕೊಡಲಾಗಿದೆ. ಮಾಧ್ಯಮಿಕ ಹಂತದಲ್ಲಿ ಇನ್ನೂ ಹೆಚ್ಚಿನ ವಿವರಣೆಗಳನ್ನು ಸೂಕ್ತವಾಗಿ ಒದಗಿಸಲಾಗಿದೆ. ಇದು ಮುಂದಿನ ವಿದ್ವತ್ ಶ್ರೇಣಿಗೆ ಬೇಕಾದ ಪೂರ್ಣಸಿದ್ಧತೆಯನ್ನು ಒದಗಿಸುತ್ತದೆ. ಸಂಗೀತವನ್ನು ಕಲಿಯುವ ವಿದ್ಯಾರ್ಥಿಗಳಲ್ಲಿ ಜ್ಞಾನದ ಮಟ್ಟವೂ, ಅಭ್ಯಾಸದಲ್ಲಿ ಶ್ರದ್ಧೆಯೂ ಹೆಚ್ಚಾಗಲೆಂಬ ಘನ ಉದ್ದೇಶದಿಂದ ಈ ಪಠ್ಯಪುಸ್ತಕವನ್ನು ಸಿದ್ಧಪಡಿಸಲಾಗಿದೆ. ಪಾಠಕ್ರಮದಲ್ಲಿ ಪ್ರಾಯೋಗಿಕ ಭಾಗದ ಜೊತೆಗೆ ಶಾಸ್ತ್ರಾಧ್ಯಯನವನ್ನೂ ಸೇರಿಸಲಾಗಿದೆ. ಸಂಗೀತ ಕಲೆಯ ಅಭ್ಯಾಸದಲ್ಲಿ ಕೇವಲ ಪರೀಕ್ಷೆಯಲ್ಲಿ ಉತ್ತೀರ್ಣವಾಗುವುದೇ ಗುರಿಯಲ್ಲ. ವಿದ್ಯಾರ್ಥಿಯಲ್ಲಿ ಕಲಾಸಾಮರ್ಥ್ಯಕ್ಕೂ, ಕಲಿಕೆಯಲ್ಲಿ ಸರಿಯಾದ ವ್ಯವಸ್ಥೆಗೂ ಜಾಸ್ತಿ ಒತ್ತು ಕೊಡುವ ಉದ್ದೇಶದಿಂದ ಈ ಪುಸ್ತಕ ರಚನೆಯಾಗಿದೆ. ಶಿಕ್ಷಕರೂ ಕೂಡ ಕುಂದಿಲ್ಲದ ಶಿಕ್ಷಣವನ್ನು ಕೊಡುವವರಾಗಬೇಕು. ವಿದ್ಯಾರ್ಥಿಗಳಲ್ಲಿ ಸಂಗೀತದ ಬಗ್ಗೆ ಉತ್ತಮ ಅಭಿರುಚಿಯನ್ನೂ, ಕಲಿಯುವ ಆಸಕ್ತಿಯನ್ನೂ ಶಿಕ್ಷಕರು ಬೆಳೆಸಬೇಕು.

ಈ ಪುಸ್ತಕದಲ್ಲಿ ಅಡಕವಾಗಿರುವ ವಿಷಯಗಳೆಂದರೆ ಹೆಚ್ಚಿನ ಪಾರಿಭಾಷಿಕ ಶಬ್ದಗಳು, 35 ತಾಳಗಳ ರಚನಾಕ್ರಮ ಮತ್ತು ಅವುಗಳಿಗೆ ಸಂಬಂಧಿಸಿದಂತೆ ಅಲಂಕಾರಗಳು, 72 ಮೇಳರಾಗಗಳ ರಚನೆ, ರಾಗಾಲಾಪನೆ, ನೆರವಲ್, ಸ್ವರ ಕಲ್ಪನೆ, ವಾಗ್ಗೇಯಕಾರರ ಜೀವನ ಚರಿತ್ರೆ, ಪ್ರೌಢ ಕೃತಿಗಳ ವರ್ಣಮಟ್ಟು ಇತ್ಯಾದಿ. ಸಂಗೀತ ರಚನೆಗಳಲ್ಲಿ ಕಂಡುಬರುವ ವೈವಿಧ್ಯಗಳನ್ನು ತಿಳಿಯುವುದು ಮುಖ್ಯ. ಈ ದಿಸೆಯಲ್ಲಿ ಬೋಧಕರು ಹೆಚ್ಚಿನ ಶ್ರಮವನ್ನು ವಹಿಸಬೇಕಾಗುತ್ತದೆ. ಈ ರೀತಿಯ ಪುಸ್ತಕ ಮೊಟ್ಟ ಮೊದಲಿಗೆ ತಯಾರಾಗುತ್ತಿರುವುದರಿಂದ

ಇದು ಎಲ್ಲರಿಂದಲೂ ಸ್ವಾಗತಿಸಲ್ಪಡುತ್ತದೆ ಎಂದು ನಂಬಲಾಗಿದೆ. ಶ್ರೇಷ್ಠಮಟ್ಟದ ಶಾಸ್ತ್ರೀಯ ಸಂಗೀತವನ್ನು ಉಳಿಸಿ ಬೆಳೆಸಲು ನಮ್ಮ ಘನ ಸರ್ಕಾರವು ಮತ್ತು ಪಠ್ಯ ಪುಸ್ತಕ ನಿರ್ದೇಶನಾಲಯವು ಮುಂದಾಗಿ ಬಂದು ಹಣ ಮತ್ತು ಇತರ ಸೌಲಭ್ಯಗಳನ್ನು ಒದಗಿಸಿ ಒತ್ತಾಸೆ ಕೊಟ್ಟಿರುವುದಕ್ಕೆ ಸರ್ಕಾರಕ್ಕೆ ಮತ್ತು ಇಲಾಖೆಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಪಠ್ಯಪುಸ್ತಕ ನಿರ್ದೇಶನಾಲಯದ ಅಧಿಕಾರವರ್ಗದವರ ಸಹಕಾರ ಪ್ರಶಂಸನೀಯ. ಈ ಪುಸ್ತಕ ರಚನೆಯಲ್ಲಿ ಸಮಿತಿಯ ಸದಸ್ಯರೆಲ್ಲರೂ ಬಹುವಾಗಿ ಸಹಕರಿಸಿದ್ದಾರೆ. ಅವರಿಗೆಲ್ಲಾ ನನ್ನ ಅಭಿನಂದನೆಗಳು. ಎಲ್ಲಕ್ಕಿಂತಲೂ ಮಿಗಿಲಾಗಿ ಸತತವಾಗಿ ಸಮಿತಿಯ ಸಭೆಗಳಲ್ಲಿ ಭಾಗವಹಿಸಿ ಉತ್ತಮ ಮಾರ್ಗದರ್ಶನವನ್ನು ನೀಡಿದ ಸಮನ್ವಯಾಧಿಕಾರಿ, ವಿದುಷಿ **ಶ್ರೀಮತಿ ರುಕ್ಮಿಣಿಯಮ್ಮ** ನವರಿಗೆ ನನ್ನ ಅನಂತ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ನ್ಯೂ ಅರುಣ ಮ್ಯೂಸಿಕಲ್ಸ್, ಬಸವನಗುಡಿ, ಬೆಂಗಳೂರು, ಇವರು ಈ ಪುಸ್ತಕಕ್ಕೆ ಅಗತ್ಯವಾದ ಸಂಗೀತ ವಾದ್ಯಗಳ ಛಾಯಾಚಿತ್ರಗಳನ್ನು ಒದಗಿಸಿ ಸಹಕರಿಸಿದ್ದಾರೆ. ಇದಕ್ಕಾಗಿ ಅವರನ್ನು ನಾನು ಅಭಿನಂದಿಸುತ್ತೇನೆ.

ಉತ್ತಮ ಮಟ್ಟದಲ್ಲಿ ಮುದ್ರಣ ಕಾರ್ಯವನ್ನು ನಿರ್ವಹಿಸಿ ಕೊಟ್ಟುದುದ್ದಲ್ಲದೆ ರಾಜ್ಯದಾದ್ಯಂತ ಈ ಪಠ್ಯಪುಸ್ತಕಗಳ ಸರಬರಾಜನ್ನು ಮಾಡಿಕೊಟ್ಟಿರುವ ಸರ್ಕಾರಿ ಕೇಂದ್ರ ಮುದ್ರಣಾಲಯದ ನಿರ್ದೇಶಕರಿಗೆ ನನ್ನ ಅಭಿನಂದನೆಗಳು. ಇದಲ್ಲದೆ ಅನೇಕ ರೂಪದಲ್ಲಿ ಪುಸ್ತಕ ರಚನೆಗೆ ಬೇಕಾದ ಚಿತ್ರಗಳನ್ನು ಮತ್ತಿತರ ವಿಷಯಗಳನ್ನು ಒದಗಿಸಿರುವ ಎಲ್ಲ ಮಹನೀಯರಿಗೂ ನನ್ನ ವಂದನೆಗಳು.

ಬೆಂಗಳೂರು

ಆರ್. ಕೆ. ಶ್ರೀಕಂಠನ್

ಅಧ್ಯಕ್ಷರು.

## ಬೋಧಕರಿಗೆ ಸೂಚನೆಗಳು

1. ಸಂಗೀತಾಭ್ಯಾಸದ ಅಥವಾ ಸಾಧನೆಯ ಕ್ರಮದ ಬಗ್ಗೆ ಮಾರ್ಗದರ್ಶನ ನೀಡುವುದು. ಅದರ ಕೆಲವು ಅಂಶಗಳು ಹೀಗಿವೆ : ಶ್ರುತಿಸಾಧನೆ, ದೀರ್ಘಸ್ವರ ಸಾಧನೆ, ಮಂದ್ರಸ್ಥಾಯಿಯಲ್ಲಿ ಅಭ್ಯಾಸ, ತಾರಸ್ಥಾಯಿಯಲ್ಲಿ ಅಭ್ಯಾಸ, ಒಂದೇ ಉಸಿರಿನಲ್ಲಿ ಜಂಟಿವರಸೆಗಳನ್ನು 3 ವೇಗಗಳಲ್ಲಿ ಹಾಡುವುದು, 35 ಅಲಂಕಾರಗಳನ್ನು ಮಾಯಾಮಾಳವಗೌಳ ರಾಗವಲ್ಲದೆ ಇತರ ರಾಗಗಳಲ್ಲಿ ಅಭ್ಯಸಿಸುವುದು.

2. ಕೃತಿ ಮತ್ತು ಕೀರ್ತನೆಗಳನ್ನು ಭಾವಪೂರ್ಣವಾಗಿ ಹಾಡುವ ಬಗ್ಗೆ ಮಾರ್ಗದರ್ಶನ, ಅಂದರೆ ಉಚ್ಚಾರಣೆ, ಲಕ್ಷ್ಯಜ್ಞಾನದ ಬಗ್ಗೆ ತಿಳುವಳಿಕೆ, ಒಳ್ಳೆಯ ಪಾಠವನ್ನು ಕಲಿಸಿವುದು ಅಗತ್ಯ.

3. ರಾಗಾಲಾಪನೆ ಮಾರ್ಗದರ್ಶನದಲ್ಲಿ ರಾಗ ಸಂಚಾರಗಳ ಕಡೆ, ವಿದ್ಯಾರ್ಥಿಗಳ ಗಮನವನ್ನು ಸೆಳೆಯುವುದು.

4. ಸ್ವರ ಪ್ರಸ್ತಾರದ ಬಗ್ಗೆ ಮಾರ್ಗದರ್ಶನ (ಸರ್ವಲಘು ಪ್ರಯೋಗ, ಜಂಟಿಸ್ವರಗಳ ಪ್ರಯೋಗ, ಮುಕ್ತಾಯ)

5. ಹೆಚ್ಚು ವರ್ಣಗಳ ಅಭ್ಯಾಸಕ್ಕೆ ಪ್ರಾಮುಖ್ಯತೆ.

6. ಪಠ್ಯ ಪುಸ್ತಕದಲ್ಲಿರುವ ಕೃತಿಗಳಲ್ಲದೆ ಇತರ ಕೃತಿಗಳನ್ನು ಒಂದೇ ರಾಗದಲ್ಲಿ ಬೋಧಿಸುವುದು.

7. ಹಿರಿಯ, ಹೆಸರಾಂತ ಸಂಗೀತಗಾರರ ಕಛೇರಿಯನ್ನು ಏರ್ಪಡಿಸಿ ವಿದ್ಯಾರ್ಥಿಗಳಿಗೆ ಕಛೇರಿಯ ಕ್ರಮದ ಬಗ್ಗೆ ಹೆಚ್ಚಿನ ತಿಳುವಳಿಕೆ ಉಂಟುಮಾಡುವುದು ಮತ್ತು ವಿದ್ಯಾರ್ಥಿಗಳಿಂದ ಪ್ರತಿಕ್ರಿಯೆಯ ಪ್ರವೃತ್ತಿಯನ್ನು ಪ್ರಚೋದಿಸುವುದು.

8. ವಾದ್ಯಗಾರರಿಗೆ ಕೃತಿಗಳ ಪಾಠ ಮಾಡಿಸುವಾಗ ಸ್ವರಗಳ ಜೊತೆಗೆ ಸಾಹಿತ್ಯದ ಪರಿಚಯವನ್ನು ಮಾಡತಕ್ಕದ್ದು.

9. ಸಂಗೀತ ಲಿಪಿಯನ್ನು ಅನುಸರಿಸಿ ಹಾಡುವುದನ್ನು ಹೇಳಿಕೊಡುವುದು.

10. ವಿದ್ಯಾರ್ಥಿಗಳಿಗೆ ತಂಬೂರಿಯನ್ನು ಸ್ವತಃ ಶ್ರುತಿ ಮಾಡುವುದನ್ನು ಕಲಿಸಿ, ಅವರಿಗೆ ತಾವೇ ಬಲಗೈಯ್ಯಲ್ಲಿ ತಂಬೂರಿ ಮತ್ತು ಎಡಗೈಯ್ಯಲ್ಲಿ ತಾಳ ಹಾಕಿಕೊಂಡು ಹಾಡುವುದನ್ನು ಕಲಿಸುವುದು.

ಬೆಂಗಳೂರು

ಆರ್. ಕೆ. ಶ್ರೀಕಂಠನ್
ಅಧ್ಯಕ್ಷರು

# ಪರಿವಿಡಿ

## ಶಾಸ್ತ್ರ ವಿಭಾಗ

### ಪತ್ರಿಕೆ - 1



### ಪತ್ರಿಕೆ - 2



## ಪ್ರಯೋಗ ವಿಭಾಗ

### ಪತ್ರಿಕೆ - 1

## ಪತ್ರಿಕೆ - 2



## ಪತ್ರಿಕೆ - 3

## ಶಾಸ್ತ್ರ ವಿಭಾಗ - ಪತ್ರಿಕೆ - 1

## ಅಧ್ಯಾಯ - 1

# ಸಂಗೀತದ ಮಹತ್ವ

ಕಲೆ ಎಂಬುದು ನಾನಾರ್ಥವಾಚಕಶಬ್ದ . ಸಂಗೀತ, ಶಿಲ್ಪ ನಾಟ್ಯ, ಚಿತ್ರ, ಸಾಹಿತ್ಯ ಇತ್ಯಾದಿಗಳೆಲ್ಲಾ ಲಲಿತಕಲೆಗಳೆಂದು ಕರೆಯಲ್ಪಡುತ್ತವೆ. ಮಾನವತ್ವಕ್ಕೂ ಕಾರಣೀಭೂತವಾಗುತ್ತವೆ ಈ ಕಲೆಗಳು. ಒಂದು ರಾಷ್ಟ್ರದ ಪ್ರಗತಿಯು ಕಲೆಗಳನ್ನೇ ಅವಲಂಭಿಸಿದೆ ಆದ್ದರಿಂದ ಕಲೆಯಿಂದ ಮಾನವ ಮಾನವನಿಂದ ಕಲೆ ಎನ್ನಬಹುದು. ಹೀಗೆ ಕಲೆ ವಿಶ್ವವ್ಯಾಪಿಯಾದದ್ದು. ಈ ಲಲಿತಕಲೆಗಳೆಲ್ಲಾ ಒಟ್ಟುಗೂಡಿ ಒಂದು ಪ್ರಪಂಚವೇ ಸೃಷ್ಟಿಯಾಗುತ್ತದೆ. ಈ ಕಲಾ ಪ್ರಪಂಚವನ್ನು ಹೊಕ್ಕು, ಕಲೋಪಾಸನೆಯಲ್ಲಿ ತೊಡಗಿ ದರ್ಶನ, ಶ್ರವಣ ಮತ್ತು ಮನನವೆಂಬ ವಿಧವಾದ ಹಂತಗಳಿಂದ ರಸೋತ್ಪತ್ತಿಯಾದಾಗ ಮಾನವನಿಗೆ ಮಹೋನ್ನತವಾದ ಕಲಾನುಭವವಾಗಿ ತನ್ಮೂಲಕ ಮಾನವತೆಗೆ ಒಯ್ದು ವಿಶ್ವಮಾನವನನ್ನಾಗಿ ಪರಿವರ್ತಿಸುತ್ತದೆ. ಕಲಾರತ್ನಗಾನಂ ಎಂಬ ಉಕ್ತಿಯಂತೆ ಲಲಿತಕಲೆಗಳಲ್ಲೆಲ್ಲಾ ರತ್ನಪ್ರಾಯವಾದ ಸಂಗೀತಕಲೆಯಂತೂ ಮಾನವನಿಗೆ ಸಾಕ್ಷಾತ್ಕಾರವನ್ನೇ ನೀಡುವ ಉತ್ತಮೋತ್ತಮವಾದ ಸುಲಭ ಸಾಧನವಾಗಿದೆ.

ಅನಾದಿಕಾಲದಿಂದಲೂ ಚರಾಚರಾತ್ಮಕಗಳಿಂದ ಕೂಡಿರುವ ಈ ವಿಶ್ವದ ಸೃಷ್ಟಿಕರ್ತನಾದ ಭಗವಂತನ ಸಾಕ್ಷಾತ್ಕಾರ ಪಡೆಯುವುದಕ್ಕೆ ಮಾನವನು ಅನೇಕ ಸಾಧನಗಳನ್ನು (ಯೋಗ, ತಪಸ್ಸು, ಯಾಗ ಇತ್ಯಾದಿ) ಬಳಸಿದ್ದರೂ, ರಸದ್ಭರಿತವಾದ, ಹೃದಯಂಗಮವಾದ, ಲಲಿತಕಲೆಗಳಲ್ಲೆಲ್ಲಾ ಉತಷ್ಟವಾದ ಸಂಗೀತಕಲೆಯು ಬಹು ಸೂಕ್ತವಾದ, ಸುಲಭಸಾಧ್ಯವಾದ ಸಾಧನವೆಂದು ಅರಿತು ಅದನ್ನು ಬೆಳಸಿ, ಪೋಷಿಸಿ ಶ್ರೀಮಂತಗೊಳಿಸಿದ್ದಾನೆ. ಇದಕ್ಕೆ ನಮ್ಮ ಭಾರತೀಯ ಶಾಸ್ತ್ರ ಪುರಾಣಗಳಲ್ಲಿ ಮತ್ತು ಸಕಲ ಧರ್ಮಕರ್ಮಗಳನ್ನು ನಿರೂಪಿಸುವ ಅತ್ಯಂತ ಪ್ರಾಚೀನವಾದ ಚತುರ್ವೇದಗಳಲ್ಲಿ ಒಂದಾದ ಸಾಮವೇದದ ಉಪವೇದವಾದ ಗಾಂಧರ್ವ ವೇದದಲ್ಲಿ ಉಲ್ಲೇಖವಿದೆ. ಹೀಗೆ ಪರಮಾತ್ಮನನ್ನು ಸಾಮಗಾನಲೋಲನೆಂದೂ, ನಾದಲೋಲ, ಗಾನಲೋಲನೆಂದೂ, ಈ ನಾದವೇ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣೀಭೂತವೆಂದೂ ನಮ್ಮ ಶೃತಿ ಸ್ಮೃತಿಗಳು ಅವಿಚ್ಛಿನ್ನವಾಗಿ ಸಾರಿವೆ; **"ಸಮುದಿತೇ ನಾದೇ ಜಗತ್ಕಾರಣಂ" "ನಾದ ತನುಂಶಂಕರಂ", "ಬಿಂದೋರ್ನಾದ ಸಮುದ್ಭವಃ"**. ನಾದೇನ ವ್ಯಜ್ಯತೇರ್ವರ್ಣ ಪದಂ ವರ್ಣಾತ್ಪದಾದ್ವಚಃ ವಚಸೋ ವ್ಯವಹಾರೋಯಂ ನಾದಾಧೀನ ಮತೋಜಗತ್ ಅಂದರೆ ನಾದನಿಂದ ವರ್ಣಗಳು, ವರ್ಣದಿಂದ ಪದಗಳು, ಪದಗಳಿಂದ ವಾಕ್ಕು, ವಾಕ್ಕಿನಿಂದ ಸಮಸ್ತವಾದ ಲೋಕ ವ್ಯವಹಾರಗಳೂ ಪ್ರಕಟವಾಗುವುದರಿಂದ ಈ ಜಗತ್ತೇ ನಾದಾಧೀನ. ಹಾಗೇಯೇ ಚೈತನ್ಯಂ ಸರ್ವಭೂತಾನಂ ನಿರ್ವೃತಿರ್ಜಗದಾತ್ಮಾನಾಂ... ನಾದಬ್ರಹ್ಮತದಾನಂದಂ ಅದ್ವಿತೀಯಂ.... ಅಂದರೆ ವಿಶ್ವವ್ಯಾಪಿಯಾಗಿ, ಆನಂದಮಯವಾಗಿ ಸಕಲ ಜೀರಾಶಿಗಳಿಗೆಲ್ಲಾ ಆಧಾರವಾಗಿರುವ ನಾದವು ಬ್ರಹ್ಮಸ್ವರೂಪ. ಹೀಗೆ ಈ ಶ್ಲೋಕಗಳು ನಾದದ ಲಕ್ಷಣ ಮತ್ತು ಮಹತ್ವವೇನೆಂಬುದನ್ನು ಸಾರುತ್ತವೆ.

ಭಾರತವನ್ನು ಸಂಗೀತದ ನಾಡೆಂದು ಕರೆಯುವುದುಂಟು ಕಾರಣ ಸಂಗೀತವು ನಮ್ಮ ರಾಷ್ಟ್ರಜೀವನದ ಮುಖ್ಯ ಭಾಗವಾಗಿದೆ. ಈ ಪವಿತ್ರವಾದ ಸಂಗೀತ ಅಥಾವಾ ನಾದೋಪಾಸನವು ತ್ಯಾಗರಾಜರೇ ಮೊದಲಾದ ಅನೇಕ ಮಹನೀಯರಿಗೆ ಭಗವತ್ ಸಾಕ್ಷಾತ್ಕಾರಕ್ಕೆ ದಾರಿದೀಪವಾಗಿರುವುದಲ್ಲದೆ, ಈ ಜಗತ್ತಿನ ಸಮಸ್ತ ಚೇತನಾ-ಚೇತನಗಳಿಗೂ ಸದಾನಂದವನ್ನು ಉಂಟುಮಾಡುವುದರಲ್ಲಿ ಯಶಸ್ವಿಯಾಗಿದೆ. ಈ ಸಂದರ್ಭದಲ್ಲಿ **"ಶಿಶುರ್ವೇತ್ತಿ ಪಶುರ್ವೇತ್ತಿ - ವೇತ್ತಿಗಾನರಸಂಫಣಿ"** ಎಂಬ ಉಕ್ತಿಯನ್ನು ನೆನೆಯಬಹುದು. ಹೀಗೆ ಸಂಗೀತಕಲೆಯು ಸರ್ವದೇಶ, ಸರ್ವಕಾಲಗಳಲ್ಲೂ

ಸರ್ವಾದರಣೀಯುವಾಗಿ, ತನ್ನ ಸುಧಾಸ್ವಾದನದ ವೈಭವ, ಅನುಭವ, ಸ್ವರೂಪ ವೈವಿಧ್ಯದಿಂದ ವಿಶ್ವದ ವಿವಿಧ ಸ್ಥಿತಿಗತಿಗಳಲ್ಲಿ ಭಾಗಿಯಾಗಿ ನಿತ್ಯಜೀವನದೊಂದಿಗೆ ಸೇರಿ, ವಿಕಾಸವಾಗುತ್ತ ತನ್ನ ಪರಿಪೂರ್ಣತೆಯಿಂದ ಜಗತ್ತಿನ ಸಂಗೀತ ಪದ್ಧತಿಗಳಿಗೆ ಮಾದರಿಯಾಗಿ, ಅವುಗಳನ್ನು ಮೀರಿ ನಿಂತಿರುವುದು ಸಕಲ ಭಾರತೀಯರಿಗೆ ಹೆಮ್ಮೆಯ ವಿಷಯವಾಗಿದೆ. ಕಲೋಪಾಸಕನನ್ನು ನಾದಾನುಸಂಧಾನದಿಂದ ಬಾಹ್ಯವನ್ನು ಮರೆಸಿ, ಭಾವನಾ ಪ್ರಪಂಚಕ್ಕೆ ಒಯ್ದು, ಆತ್ಮವಿಕಾಸಕ್ಕೂ ಮತ್ತು ಪರಿಪೂರ್ಣತೆಯ ಸೌಂದರ್ಯದ ಅನುಭವಕ್ಕೂ ಕಾರಣೀಭೂತವಾದ ಏಕೈಕ ಸಾಧನವಾಗಿದೆ ಸಂಗೀತ ಕಲೆ. ಇದರಿಂದ ಸಂಗೀತಕಲೆ ವಿಶ್ವಭಾವನೆಗಳ ಭಾಷೆಯಾಗಿದೆ. ರಾಗ, ಲಯ, ಭಾವ, ರಸ, ಸಾಹಿತ್ಯವೆಂಬ ವಿವಿಧ ಸೌಂದರ್ಯಗಳ ಸಮ್ಮಿಳನದಿಂದ ಪರಿಣಮಿಸುವ ಒಂದು ರಸಪಾಕವೇ ಆಗಿದೆ ಈ ಸಂಗೀತ ಕಲೆ. ಆದ್ದರಿಂದ ಸಂಗೀತವನ್ನು ಅನುಭವವೇದ್ಯ ಕಲೆ ಎಂದೇ ಕರೆಯಬೇಕು. ಮಾನವನ ಹೃದಯದ ಗಂಟು ಗೋಜುಗಳನ್ನು ಸಡಿಲಮಾಡಿ ಮೃದುಗೊಳಿಸಿ ಮಾನವೀಯ ಮೌಲ್ಯಗಳಿಗೆ ಸ್ಪಂದಿಸುವಂತೆ ಮಾಡಿ ಅವನನ್ನು ಮಾನವೀಯತೆಗೆ ಒಯ್ದು ಸುಸಂಸ್ಕೃತನನ್ನಾಗಿ ಮಾಡುವ ಏಕೈಕ ಪ್ರಮುಖ ಸಾಧನವಾಗಿದೆ ಸಂಗೀತ ಕಲೆ. ಮನುಷ್ಯನು ಸುಸಂಸ್ಕೃತನೆಂದರೆ ಅವನಲ್ಲಿ ಕಲೆಯ ಅರಿವು, ಪ್ರಜ್ಞೆ ಇದೆ ಎಂದು ಅರ್ಥ. ಆದ್ದರಿಂದ ಕಲೆಗಳಿಲ್ಲದ ಬದುಕು ಬೆಳೆಯಲಾರದು ಮತ್ತು ಹದವಾಗಲಾರದು. ಹೀಗೆ ಒಂದು ಕಡೆ ಸಂಗೀತವು ಕಲೆಯಾಗಿದ್ದರೆ, ಮತ್ತೊಂದು ಕಡೆ, ಅದು ಮನುಷ್ಯರಿಗೆ ನಿಜವಾದ ಸಾಮಾಜಿಕ ಮತ್ತು ಆಧ್ಯಾತ್ಮಿಕ ಪ್ರಜ್ಞೆಯನ್ನು ಉಂಟುಮಾಡುವುದರಲ್ಲಿ ಯಶಸ್ವಿಯಾಗಿ **ವಿದ್ಯೆ** ಎನಿಸಿಕೊಂಡಿದೆ. ಮನುಷ್ಯನನ್ನು ಸುಸಂಸ್ಕೃತನಾಗಿ ಮಾಡುವ ಅದ್ವಿತೀಯ ಸಾಧನವಾಗಿದೆ. ಆದ್ದರಿಂದ ಕಲೆಯೂ ಮತ್ತು ವಿದ್ಯೆಯೂ ಆಗಿರುವ ಈ ಸಂಗೀತವು, ಸಮಾಜದಲ್ಲಿ ವಹಿಸುವ ಪಾತ್ರ ಅವರ್ಣನೀಯ. ಇದರ ಸಾಮಾಜಿಕ ಮತ್ತು ಸಾಂಸ್ಕೃತಿಕ ಮೌಲ್ಯಮಹತ್ತರವಾದದ್ದು.



# ಅಧ್ಯಾಯ - 2

## ಪಾರಿಭಾಷಿಕ ಶಬ್ದಗಳು

ಸಂಕ್ಷಿಪ್ತ ವಿವರಣೆ-

ಕರ್ನಾಟಕ ಶಾಸ್ತ್ರೀಯ ಸಂಗೀತದಲ್ಲಿ ಉಪಯೋಗಿಸಲ್ಪಡುವ ವಿಶೇಷ ಶಬ್ದಗಳಿಗೆ ಪಾರಿಭಾಷಿಕ ಶಬ್ದಗಳೆನ್ನುವರು. ಈ ಶಬ್ದಗಳ ಪರಿಚಯವಿಲ್ಲದೆ, ಸಂಗೀತ ಶಾಸ್ತ್ರ ಅರ್ಥಮಾಡಿಕೊಳ್ಳುವುದು ಕಷ್ಟಸಾಧ್ಯ.

1. ನಾದ :

ಸಮಾನ ಸ್ಥಿತಿಯ ಕಂಪನ ಅಥವಾ ಸ್ಪಂದನಗಳಿಂದ ಅವಿಚ್ಛಿನ್ನವಾಗಿ ಹೊರಡುವ ಸುಶ್ರಾವ್ಯವಾದ ಅಥವಾ ಶ್ರವಣಯೋಗ್ಯವಾದ ಶಬ್ದ ಅಥವಾ ಧ್ವನಿಗೆ ನಾದವೆಂದು ಹೆಸರು. **ನಾದಾತ್ಮಕಂಜಗತ್** ಎಂದು ಹೇಳಿರುವ ಹಾಗೆ ಪ್ರಪಂಚವೇ ನಾದಮಯ.

ನಮ್ಮ ಭಾರತೀಯ ಸಂಗೀತ ಶಾಸ್ತ್ರದಲ್ಲಿ ನಾದವನ್ನು ಪ್ರಾಣಾಗ್ನಿ ಮತ್ತು ಪ್ರಾಣವಾಯುಗಳ ಸಂಘರ್ಷಣೆಯಿಂದ ಉಂಟಾಗುವ ಶಬ್ಧವೆಂದು ವಿವರಿಸಿದ್ದಾರೆ. (ನಾ ಎಂದರೆ ಪ್ರಾಣವಾಯು, ದ ಎಂದರೆ ಪ್ರಾಣಾಗ್ನಿ). ಇದೇ ಕ್ರಿಯೆಯನ್ನು ತ್ಯಾಗರಾಜರು ತಮ್ಮ ಸಾರಮತಿ ರಾಗದ ಮೋಕ್ಷಮುಗಲದ ಕೀರ್ತನೆಯಲ್ಲಿ **ಪ್ರಾಣಾನಲ ಸಂಯೋಗಮು ವಲ್ಲ ಪ್ರಣವ ನಾದಮು ಸಪ್ತಸ್ವರಮುಲು ಬರಗ** ಎಂದು ಸೊಗಸಾಗಿ ವರ್ಣಿಸಿದ್ದಾರೆ. ಈ ನಾದವು ಮಾನವ ಶರೀರದ ಆರು ಮುಖ್ಯ ಸ್ಥಾನಗಳಾದ ನಾಭಿ, ಹೃದಯ, ಕಂಠ, ನಾಲಗೆ, ಮೂಗು ಮತ್ತು ಶಿರಸ್ಸುಗಳಿಂದ ಪುಷ್ಟಿಗೊಂಡು ಪ್ರಕಟವಾಗುತ್ತದೆ. ಇದನ್ನು ಮತ್ತೆ ತ್ಯಾಗರಾಜರು ತಮ್ಮ ಜಗನ್ಮೋಹಿನಿ ರಾಗದ **ಶೋಭಿಲ್ಲು ಸಪ್ತಸ್ವರ** ಕೀರ್ತನೆಯಲ್ಲಿ ಸೂಚಿಸಿದ್ದಾರೆ.

ಈ ನಾದವು ಅನಾಹತ ಮತ್ತು ಆಹತ ನಾದವೆಂದು ವಿಂಗಡಿಸಲ್ಪಡುತ್ತದೆ. ಮೂಲಾಧಾರದಿಂದ ಹೊರಡುವ ಕಿವಿಗೆ ಅಗೋಚರವಾಗಿರುವ ನಾದವೇ **ಅನಾಹತ ನಾದ** ಮತ್ತು ಸಾಕಷ್ಟು ಕಂಪನ ಅಥವಾ ಸ್ಪಂದನಗಳನ್ನು ಹೊಂದಿ ಶ್ರವಣ ಯೋಗ್ಯತೆಯನ್ನು ಪಡೆಯುವ ನಾದ **ಆಹತ ನಾದ**ವಾಗುತ್ತದೆ.

**ಶ್ರುತಿ :** ಕಿವಿಗೆ ಗೋಚರವಾಗುವ ಅತಿಸೂಕ್ಷ್ಮವಾದ ನಾದಕ್ಕೆ ಶ್ರುತಿ ಎಂದು ಹೆಸರು. ಎರಡು ಸಮೀಪ ಸ್ವರಗಳ ಮಧ್ಯೆ ಇರುವ ನಾದದ ಅಂತರವನ್ನು **ಶ್ರುತಿ** ಎಂದು ಕರೆಯುತ್ತಾರೆ.

**ಸ್ವರ :** ಶ್ರವಣಯೋಗ್ಯವಾಗಿ, ಸಂಗೀತಕ್ಕೆ ಉಪಯೋಗಿಸಲ್ಪಡುವ ಧ್ವನಿ ಅಥವಾ ನಾದಕ್ಕೆ **ಸ್ವರ** ಎಂದು ಹೆಸರು. (ಸ್ವತೋರಂಜಯತೀತಿ ಸ್ವರಃ) ಒಟ್ಟು ಏಳು ಅಥವಾ ಸಪ್ತಸ್ವರಗಳಿವೆ : ಷಡ್ಜ, ರಿಷಭ, ಗಾಂಧಾರ, ಮಧ್ಯಮ, ದೈವತ ಮತ್ತು ನಿಷಾದ. ಸ್ವರಗಳಲ್ಲಿ **ಪ್ರಕೃತಿ ಸ್ವರ** (ಷಡ್ಜ ಮತ್ತು ಪಂಚಮ) ಮತ್ತು **ವಿಕೃತಿ ಸ್ವರ**ಗಳು (ರಿಷಭ, ಗಾಂಧಾರ, ಮಧ್ಯಮ, ದೈವತ, ನಿಷಾದ) ಎಂಬ ಎರಡು ಭೇದಗಳಿವೆ.

ಒಟ್ಟಿನಲ್ಲಿ ಹೇಳುವುದಾದರೆ ನಾದದಿಂದ ಶ್ರುತಿ, ಶ್ರುತಿಯಿಂದ ಷಡ್ಜಾದಿ ಸ್ವರಗಳು, ಸ್ವರಗಳಿಂದ ರಾಗ, ಮತ್ತು ರಾಗದಿಂದ ಸಂಗೀತವು ಉಂಟಾಗುತ್ತದೆ.

2. ಸ್ಥಾಯಿ :

ಸಪ್ತಸ್ವರಗಳ ಗುಂಪಿಗೆ **ಸ್ಥಾಯಿ** ಅಥವಾ **ಸಪ್ತಕ**ವೆಂದು ಹೆಸರು. ಇದನ್ನು ಆಂಗ್ಲರು ಆಕ್ಟೇವ್ ಎಂದು ಕರೆಯುತ್ತಾರೆ. ಇದು ಮುಖ್ಯವಾಗಿ 3 ವಿಧಗಳು:

**1. ಮಂದ್ರ ಸ್ಥಾಯಿ** **2. ಮಧ್ಯ ಸ್ಥಾಯಿ** **3. ತಾರ ಸ್ಥಾಯಿ**

1. **ಮಂದ್ರಸ್ಥಾಯಿ** ಎಂದರೆ ಆಧಾರಷಡ್ಜದಿಂದ ಕೆಳಕ್ಕೆ ಬರುವ ಸ್ವರಗಳ ಸಮೂಹ.

ಮಂದ್ರಸ್ಥಾಯಿಯನ್ನು ಸ್ವರಗಳ ಕೆಳಗೆ ಚುಕ್ಕೆ ಇಡುವುದರ ಮೂಲಕ ಸೂಚಿಸುತ್ತೇವೆ.

ಉದಾ: ನಿ̣ ದ̣ ಪ̣ ಮ̣ ಗ̣ ರಿ̣ ಸ̣

2. **ಮಧ್ಯ ಸ್ಥಾಯಿ** ಎಂದರೆ ಆಧಾರಷಡ್ಜದಿಂದ ಆರೋಹಣ ಕ್ರಮದಲ್ಲಿ ನಿಷಾದದವರೆಗೂ ಬರುವ ಸ್ವರಗಳ ಸಮೂಹ.

ಉದಾ: ಸ ರಿ ಗ ಮ ಪ ದ ನಿ

3. **ತಾರ ಸ್ಥಾಯಿ** ಎಂದರೆ ಮಧ್ಯ ಸ್ಥಾಯಿಯ ನಿಷಾದದಿಂದ ಮೇಲಕ್ಕೆ ಬರುವ ಸ್ವರಗಳ ಸಮೂಹ.

ಸ್ವರಗಳ ಮೇಲೆ ಚುಕ್ಕೆ ಇಡುವುದರ ಮೂಲಕ ಸೂಚಿಸುತ್ತೇವೆ.

ಉದಾ- ಸ̇ ರಿ̇ ಗ̇ ಮ̇ ಪ̇ ದ̇ ನಿ̇

**ಅನುಮಂದ್ರ**ವೆಂದರೆ ಮಂದ್ರಸ್ಥಾಯಿ ಷಡ್ಜದಿಂದ ಕೆಳಕ್ಕೆ ಬರುವ ಸ್ವರಗಳ ಸಮೂಹ.

ಉದಾ- ನಿ̤ ದ̤ ದ̤ ಪ̤ ಪ̤ ಮ̤ ಮುಂತಾದವು.

**ಅತಿತಾರ**ವೆಂದರೆ ಮಧ್ಯಸ್ಥಾಯಿ ಷಡ್ಜದಿಂದ ಮೂಲಕ ಬರುವ ಸ್ವರಗಳ ಸಮೂಹ.

ಉದಾ:- ಸ̤ ರಿ̤ ಗ̤ ರಿ̤ ಗ̤ ಮ̤ ಮುಂತಾದವು.

ಈ ಎಲ್ಲಾ ಸ್ಥಾಯಿಗಳಲ್ಲೂ ಪ್ರಕೃತಿ ಮತ್ತು ವಿಕೃತಿ ಸ್ವರಗಳು ಮತ್ತು ಅವುಗಳ ಪ್ರಬೇಧಗಳು ಪುನರಾವರ್ತಿಸುತ್ತವೆ.

ಶಾರೀರದಲ್ಲಿ ಕೇವಲ 3 ಸ್ಥಾಯಿಗಳು ಮಾತ್ರ ಗೋಚರಿಸುವುದಾದರೆ, ವೀಣೆಯಲ್ಲಿ ಎಲ್ಲಾ ಐದು ಸ್ಥಾಯಿಗಳನ್ನು ಹೊರತರಲು ಅವಕಾಶವಿರುತ್ತದೆ.

4. ಗ್ರಹ :

ಗ್ರಹವೆಂಬ ಶಬ್ದವನ್ನು ರಾಗ ಮತ್ತು ತಾಳಗಳಲ್ಲೂ ಪ್ರಯೋಗ ಮಾಡಲಾಗುತ್ತದೆ.

ರಾಗವನ್ನು ಅಥವಾ ಕೃತಿಯನ್ನು ಆರಂಭ ಮಾಡುವ ಸ್ವರಕ್ಕೆ **ಗ್ರಹಸ್ವರ**ವೆಂದು ಕರೆಯುತ್ತಾರೆ.

ತಾಳದಲ್ಲಿ ಗ್ರಹದ ವರ್ಗೀಕರಣ ಹೀಗಿರುತ್ತದೆ :



### 5. ಪೂರ್ವಾಂಗ ಮತ್ತು ಉತ್ತರಾಂಗ :

ಪೂರ್ವಾಂಗವೆಂದರೆ ಒಂದು ಗೇಯ ರಚನೆಯ ಮೊದಲನೆಯ ಭಾಗ.

ಉತ್ತರಾಂಗವೆಂದರೆ ಒಂದು ಗೇಯ ರಚನೆಯ ಎರಡನೆಯ ಭಾಗ.

ಈ ವಿಭಜನೆಯ ವಿಭಾಗ ಹೀಗಿದೆ.

| | ಪ್ರಾಕಾರ | ಪೂರ್ವಾಂಗ | ಉತ್ತರಾಂಗ |
|---|---|---|---|
| 1. | ವರ್ಣ | ಪಲ್ಲವಿ, ಅನುಪಲ್ಲವಿ<br>ಮುಕ್ತಾಯ ಸ್ವರ | ಚರಣ<br>ಚರಣ ಸ್ವರಗಳು |
| 2. | ತಾಳ<br>(ಆದಿತಾಳ) | ಲಘು | ದ್ರುತಗಳು |
| 3. | ಸಪ್ತಸ್ವರ | ಸರಿಗಮ | ಪದನಿಸ |

**ಸಂಗತಿ :** ಒಂದು ಕೃತಿಯ ಸಾಹಿತ್ಯದ ಅರ್ಥ, ಮತ್ತು ರಾಗಭಾವಗಳನ್ನು ಪೂರ್ಣವಾಗಿ ಹೊರಪಡಿಸಲು ಅಳವಡಿಸುವ ಸಾಧನವೇ **ಸಂಗತಿ.**

ಆದ್ದರಿಂದ ಇದನ್ನು ಕೃತಿಗಳ ಸೌಂದರ್ಯವನ್ನು ಮತ್ತು ರಂಜಕತೆಯನ್ನು ಪ್ರಕಾಶ ಮಾಡುವ ಅಲಂಕಾರಗಳಲ್ಲಿ ಒಂದು ಎಂದು ಕರೆಯಬಹುದು. ಇದನ್ನು ಬಹುಮಟ್ಟಿಗೆ ಉಪಯೋಗಕ್ಕೆ ತಂದವರು ಶ್ರೀ ತ್ಯಾಗರಾಜರು. ಅವರ ಕೃತಿಗಳಲ್ಲಿ ಸಂಗತಿಗಳನ್ನು ಬಹಳ ಮನೋಜ್ಞವಾಗಿ, ಗಮನೀಯವಾಗಿ ಕಾಣಬಹುದು.

#### ಸಂಗತಿ :

ಸಾಧಾರಣವಾಗಿ ಮೊದಲ ಸಂಗತಿ ಒಂದನೇ ಕಾಲದ ಸ್ವರ ಸಂಯೋಜನೆಯನ್ನು ಹೊಂದಿದ್ದು, ಸರಳವಾಗಿರುತ್ತದೆ. ಹಂತ ಹಂತವಾಗಿ ಎರಡನೇ ಮತ್ತು ಮೂರನೇ ಕಾಲದ ಸ್ವರಗಳನ್ನು ಬಳಸುವುದರ ಮೂಲಕ ಸಂಯೋಜನೆಯಲ್ಲಿ ಹೆಚ್ಚಿನ ಕ್ಲಿಷ್ಟತೆ, ರಾಗ-ಭಾವ-ಸೌಂದರ್ಯವರ್ಣನೆ ಮುಂದುಮುಂದಿನ ಸಂಗತಿಗಳಲ್ಲಿ ಮೂಡಿಸಲಾಗುತ್ತದೆ.

ಉದಾ:

1. ಗಾ, ರೀ ಸ ನಿ̣ ಪ̣ ಪ̣ ರೀ ಸ ರೀ ....
   ವಾ ತಾ ಪಿ ಗ ಣ ಪ ತಿಂ ಭ ಜೇ ....
2. ಗಾ ಸ ರಿ ಗಾ ರೀ ಸ ಸ ರಿ ಸ ನಿ̣ ಪ ರೀ̣
   ವಾ. . . ತಾ ಪಿ ಗ . ಣ ಪತಿಂ. . .
3. ಗ ಪ ನಿ ಸ̇ ರೀ̇ ಸ̇ ನಿ ಪ ಗ ರೀ ಗ ರಿ ಸ ನಿ̣
   ವಾ ತಾ ಪಿ ಗ. ಣಪತಿಂ

- ಇತ್ಯಾದಿ.

**ವಾದಿ, ಸಂವಾದಿ, ಅನುವಾದಿ, ವಿವಾದಿ :**

ಸ್ವರಗಳನ್ನು ವಾದಿ, ಸಂವಾದಿ, ಅನುವಾದಿ ಮತ್ತು ವಿವಾದಿ ಎಂದು ವಿಭಜಿಸಲಾಗಿದೆ.

**ವಾದಿಸ್ವರ :**

ಒಂದು ರಾಗದಲ್ಲಿ ಪದೇ ಪದೇ ಉಪಯೋಗಿಸಲ್ಪಡುವ ಸ್ವರಕ್ಕೆ **ವಾದಿ ಸ್ವರ**ವೆಂದು ಹೆಸರು. ಇದಕ್ಕೆ ಜೀವಸ್ವರ ಅಥವಾ ಅಂಶಸ್ವರವೆಂದೂ ಕರೆಯಬಹುದು.

ಪ್ರತಿಯೊಂದು ರಾಗಕ್ಕೂ ಅಂಶಸ್ವರ ಅಥವಾ ಜೀವಸ್ವರ ಬೇರೆ ಬೇರೆ ಇರುತ್ತದೆ. ಕೆಲವು ವೇಳೆ ಒಂದಕ್ಕಿಂತ ಹೆಚ್ಚು ಸ್ವರಗಳೂ ಜೀವಸ್ವರಗಳಾಗಿರಬಹುದು. ಈ ಸ್ವರವನ್ನು ರಾಜನಿಗೆ ಹೋಲಿಸಲಾಗಿದೆ. (ಷಡ್ಜ ಮತ್ತು ಪಂಚಮ ಸ್ವರಗಳೇ ವಾದಿ ಸ್ವರಗಳು).

ಪಂಚಮರಹಿತ ರಾಗಗಳೂ ಹೇರಳವಾಗಿವೆ.

**ಸಂವಾದಿ :**

ರಾಗದಲ್ಲಿ ಬರುವ ಎರಡು ಸ್ವರಗಳ ಮಧ್ಯೆ ಎಂಟು ಅಥವಾ ಹನ್ನೆರಡು ಶ್ರುತಿಗಳ ಅಂತರವಿದ್ದರೆ ಆ ಸ್ವರಗಳನ್ನು **ಸಂವಾದಿ ಸ್ವರ**ಗಳೆಂದು ಕರೆಯುತ್ತಾರೆ.

ಈ ಎರಡು ಸ್ವರಗಳ ಮಧ್ಯೆ ಧ್ವನಿ ಮೈತ್ರಿಯು ಇರುವುದರಿಂದ ಏಕಕಾಲದಲ್ಲಿ ಈ ಸ್ವರಗಳು ಧ್ವನಿಗೈದಾಗ ಬಹಳ ಕರ್ಣರಂಜಿತವಾಗಿರುತ್ತದೆ.

ಷಡ್ಜ-ಮಧ್ಯಮ, ಮತ್ತು ಷಡ್ಜ-ಪಂಚಮ, ರಿಷಭ-ದೈವತ, ಗಾಂಧಾರ-ನಿಷಾದಗಳೇ ಸಂವಾದಿಸ್ವರಗಳು.

**ಅನುವಾದಿ:**

ವಾದಿ, ಸಂವಾದಿ ಮತ್ತು ವಿವಾದಿಗಳಲ್ಲದ ಸ್ವರಗಳೇ ಅನುವಾದಿ ಸ್ವರಗಳು. ಇದನ್ನು ಸೇವಕನಿಗೆ ಹೋಲಿಸಿದ್ದಾರೆ.

**ವಿವಾದಿ:**

ರಾಗದಲ್ಲಿ ಎರಡು ಸ್ವರಗಳ ಅಂತರ 2 ಶ್ರುತಿಗಳಾಗಿದ್ದರೆ ಆ ಸ್ವರಗಳಿಗೆ ವಿವಾದಿ ಸ್ವರಗಳೆಂದು ಅಥವಾ ಶತ್ರು ಸ್ವರಗಳೆಂದು ಕರೆಯುತ್ತಾರೆ. ಏಕಕಾಲದಲ್ಲಿ ಈ ಸ್ವರಗಳು ಧ್ವನಿಗೈದಾಗ ಕರ್ಣಕಠೋರವಾಗಿರುತ್ತದೆ. ಇದಕ್ಕೆ ವಿವಾದಿ ದೋಷವೆಂದು ಹೆಸರು.

ಉದಾ :

ಶುದ್ಧ ಸ್ವರಗಳಲ್ಲಿ - ರಿ$_1$ - ಗ$_1$, ದ$_1$ - ನಿ$_1$ ಮ$_1$ - ಮ$_2$

ವಿಕೃತಿಸ್ವರಗಳಲ್ಲಿ ಗ$_2$ - ರಿ$_3$, ನಿ$_1$ - ದ$_3$

**1. ಗ್ರಹಸ್ವರ 2. ನ್ಯಾಸಸ್ವರ 3. ಅಂಶಸ್ವರ.**

ಯಾವುದೇ ರಾಗಕ್ಕೆ ಮೂರು ಪ್ರಧಾನ ಸ್ವರಗಳುಂಟು. ಇವಕ್ಕೆ ಸ್ವರಾಂಗಗಳೆಂದು ಕರೆಯುತ್ತಾರೆ. ಇದರಲ್ಲಿ ಮೊದಲನೆಯದು ಜೀವಸ್ವರ ಅಥವಾ ಗ್ರಹಸ್ವರ. ರಾಗ ಪ್ರಾರಂಭವಾಗುವ ಸ್ವರವೇ ಗ್ರಹಸ್ವರ. ರಾಗದ ಭಾವವನ್ನು ಸ್ಪಷ್ಟಪಡಿಸಲು ಪದೇ ಪದೇ ಬಳಸುವ ಸ್ವರ ಜೀವಸ್ವರ ಅಥವಾ ಅಂಶಸ್ವರ.

ರಾಗದಲ್ಲಿ ರಾಗವಿಸ್ತಾರಕ್ಕೆ ಉಪಯೋಗಿಸಲ್ಪಡುವ ಸ್ವರವೇ ಅಂಶಸ್ವರ.

ರಾಗವನ್ನು ಮುಕ್ತಾಯಗೊಳಿಸುವ ಸ್ವರವೇ ನ್ಯಾಸಸ್ವರ.

**ತಾಳದ ಷಡಂಗಗಳು :**

ತಾಳದ ವಿವಿಧ ಭಾಗಗಳಿಗೆ ಅಂಗಗಳೆಂದು ಕರೆಯುತ್ತಾರೆ. ಇವು ಮುಖ್ಯವಾಗಿ ಆರು ವಿಧಗಳಾದ್ದರಿಂದ ಇವನ್ನು ಷಡಂಗಗಳೆಂದು ಕರೆಯಲಾಗಿದೆ. ಅವು ಹೀಗಿವೆ.

1. ಅನುದ್ರುತ 2. ದ್ರುತ 3. ಲಘು 4. ಗುರು 5. ಪ್ಲುತ 6. ಕಾಕಪಾದ.

ಅನುದ್ರುತವೆಂದರೆ ಒಂದು ಪೆಟ್ಟು ಹಾಕುವುದು.

- ಒಂದು ಅಕ್ಷರಕಾಲ.

ದ್ರುತವೆಂದರೆ ಒಂದು ಪೆಟ್ಟು ಹಾಕಿ ಕೈ ಬೀಸುವುದು

- ಎರಡು ಅಕ್ಷರಕಾಲ.

ಲಘುವೆಂದರೆ ಒಂದು ಪೆಟ್ಟು ಹಾಕಿ ಬೆರಳೆಣಿಸುವುದು. ಚತುರಶ್ರ ಲಘುವಿನ 1/4 ಭಾಗ = 1 ಅಕ್ಷರಕಾಲ.

ಇದೆಲ್ಲ ವಿವರಣೆಗೆ ಮೂಲಭೂತವಾಗಿ ಅಕ್ಷರಕಾಲ ಅಂದರೇನು ಎನ್ನುವುದನ್ನು ತಿಳಿಸುವುದು ಅಗತ್ಯ. ಇವುಗಳ ಸಂಜ್ಞೆ ಮತ್ತು ಅಕ್ಷರಕಾಲ ಹೀಗಿವೆ:

| ಅಂಗ | ಸಂಜ್ಞೆ | ಅಕ್ಷರ |
|---|---|---|
| ಅನುದ್ರುತ | U | 1 |
| ದ್ರುತ | O | 2 |
| ಲಘು | 1 | 4 |
| ಗುರು | S | 8 |
| ಪ್ಲುತ | $ | 12 |
| ಕಾಕಪಾದ | + | 16 |



## ಅಧ್ಯಾಯ - 3

# ಎಪ್ಪತ್ತೆರಡು ಮೇಳಗಳ ರಚನಾಕ್ರಮ

ಕರ್ನಾಟಕ ಸಂಗೀತದಲ್ಲಿ ರಾಗಗಳ ಸಂಖ್ಯೆ ಬಹುವಾಗಿರುವುದರಿಂದ, ಅವುಗಳನ್ನು ಸರಿಯಾಗಿ, ಅರ್ಥಮಾಡಿಕೊಳ್ಳಲು ಮತ್ತು ಅಭ್ಯಸಿಸಲು, ಅವುಗಳ ವರ್ಗೀಕರಣ ಅತ್ಯಗತ್ಯ. ಈ ದಿಸೆಯಲ್ಲಿ ಕರ್ನಾಟಕ ಸಂಗೀತದಲ್ಲಿ ರಾಗಗಳನ್ನು ಮೇಳ ಮತ್ತು ಜನ್ಯ ರಾಗಗಳೆಂದು ವಿಂಗಡಿಸಲಾಗಿದೆ. ಮೇಳವನ್ನು ಮೇಳಕರ್ತ, ರಾಗಾಂಗ, ಜನಕವೆಂದೂ ಕರೆಯಲಾಗಿದೆ. ರಾಗಗಳನ್ನು ಮೇಳ ಮತ್ತು ಜನ್ಯವೆಂಬುದಾಗಿ ತಿಳಿಸಿದ ಶಾಸ್ತ್ರಕಾರರಲ್ಲಿ ವಿದ್ಯಾರಣ್ಯರೇ ಮೊದಲಿಗರು. ಎಪ್ಪತ್ತೆರಡು ಮೇಳಗಳನ್ನು ಯೋಜಿಸಿದವರು ವೆಂಕಟಮಖಿ. ಅವರ ಪದ್ಧತಿಯೇ ಅಸಂಪೂರ್ಣ ಮೇಳ ಪದ್ಧತಿಯೆನಿಸಿದೆ. ಸಂಪೂರ್ಣ ಮೇಳ ಪದ್ಧತಿಯು ಗೋವಿಂದಾಚಾರ್ಯರಿಂದ ರೂಪಗೊಂಡಿತು. ಈ ಪದ್ಧತಿಯೇ ಈಗ ಬಳಕೆಯಲ್ಲಿದೆ.

ಒಂದು ರಾಗವು ಮೇಳವೆನಿಸಿಕೊಳ್ಳಲು ಮೂರು ಅಂಶಗಳು ಅಗತ್ಯ.

1. **ಸ್ವರ ಸಂಪೂರ್ಣತೆ :**

ಆರೋಹಣ ಅವರೋಹಣಗಳಲ್ಲಿ ಸಪ್ತ ಸ್ವರಗಳು ಇರಬೇಕು.

2. **ಸ್ವರಾನುಕ್ರಮತೆ :**

ಆರೋಹಣದಲ್ಲಿ ಬರುವ ಸ್ವರಗಳೇ ಅವರೋಹಣದಲ್ಲೂ ಬರಬೇಕು.

3. **ಸ್ವರ ಸಾಮ್ಯತೆ :**

ಆರೋಹಣದ ಸ್ವರಸ್ಥಾನಗಳು ಏರಿಕೆಯ ಕ್ರಮದಲ್ಲಿದ್ದು, ಅವರೋಹಣದ ಸ್ವರಸ್ಥಾನಗಳು ಇಳಿಕೆಯ ಕ್ರಮದಲ್ಲಿರಬೇಕು.

### ಕರ್ನಾಟಕ ಸಂಗೀತದಲ್ಲಿ ಎಪ್ಪತ್ತೆರಡು ಮೇಳಗಳಿವೆ

ಎಪ್ಪತ್ತೆರಡು ಮೇಳಗಳು, ಒಂದು ಸ್ಥಾಯಿಯಲ್ಲಿರುವ ಸಪ್ತಸ್ವರದ ಹದಿನಾರು ಭೇದಗಳ ಆಧಾರದ ಮೇಲೆ ರಚಿತವಾಗಿವೆ. ಈ ಮೇಳಗಳು ಒಂದು ನಿಶ್ಚಿತವಾದ ಕಲ್ಪನೆಯ ಮೇರೆಗೆ ರೂಪಿತವಾಗಿವೆ. ಪ್ರಕೃತಿ ಸ್ವರಗಳಾದ ಷಡ್ಜ ಮತ್ತು ಪಂಚಮವಿಲ್ಲದ ಮೇಳವಿಲ್ಲ. ಮಧ್ಯಮದಲ್ಲಿ ಎರಡು ವಿಧಗಳಿದ್ದು ಶುದ್ಧಮಧ್ಯಮ ಪ್ರಯೋಗದಿಂದ ಮೂವತ್ತಾರು ಮೇಳಗಳೂ ಪ್ರತಿಮಧ್ಯಮ ಪ್ರಯೋಗದಿಂದ ಮೂವತ್ತಾರು ಮೇಳಗಳೂ ಆಗಿವೆ. ಇವೇ ಪೂರ್ವಾಂಗ ಮತ್ತು ಉತ್ತರಾಂಗ ಮೇಳಗಳೆನಿಸಿವೆ. **"ರಿಗ ಭೇದೇನ ಚಕ್ರಃ, ದನಿ ಭೇದೇನ ರಾಗಃ"** ಅಂದರೆ ರಿಷಭ ಗಾಂಧಾರಗಳಿಂದ ಚಕ್ರವೂ, ದೈವತ ನಿಷಾದಗಳಿಂದ ರಾಗವೂ ಏರ್ಪಟ್ಟಿದೆ. ಪ್ರತಿಯೊಂದು ಚಕ್ರಕ್ಕೂ ಆರು ರಾಗಗಳಿದ್ದು ಶುದ್ಧ ಮಧ್ಯಮ ಪ್ರಯೋಗವಾಗಿರುವ ಆರು ಚಕ್ರಗಳಿಂದ ಮೂವತ್ತಾರು ರಾಗಗಳೂ, ಪ್ರತಿ ಮಧ್ಯಮ ಪ್ರಯೋಗವಾಗಿರುವ ಆರು ಚಕ್ರಗಳಿಂದ ಮೂವತ್ತಾರು ರಾಗಗಳೂ, ಒಟ್ಟು 72 ಮೇಳಗಳಾಗಿವೆ. ರಿಷಭದಲ್ಲಿ 3 ವಿಧ. ಗಾಂಧಾರದಲ್ಲಿ 3 ವಿಧ. ಇವುಗಳನ್ನು ಕ್ರಮವಾಗಿ ಜೋಡಿಸಿದಾಗ ಆರು ಚಕ್ರಗಳುಂಟಾಗುತ್ತವೆ.

| | | |
|---|---|---|
| ಮೊದಲನೇ ಚಕ್ರ | ಶುದ್ಧ ರಿಷಭ ರಿ1 | ಗ1 ಶುದ್ಧ ಗಾಂಧಾರ |
| ಎರಡನೇ ಚಕ್ರ | ಶುದ್ಧ ರಿಷಭ ರಿ1 | ಗ2 ಸಾಧಾರಣ ಗಾಂಧಾರ |
| ಮೂರನೇ ಚಕ್ರ | ಶುದ್ಧ ರಿಷಭ ರಿ1 | ಗ3 ಅಂತರ ಗಾಂಧಾರ |
| ನಾಲ್ಕನೇ ಚಕ್ರ | ಚತುಶ್ರುತಿ ರಿಷಭ ರಿ2 | ಗ2 ಸಾಧಾರಣ ಗಾಂಧಾರ |
| ಐದನೇ ಚಕ್ರ | ಚತುಶ್ರುತಿ ರಿಷಭ ರಿ2 | ಗ3 ಅಂತರ ಗಾಂಧಾರ |
| ಆರನೇ ಚಕ್ರ | ಷಟ್‌ಶ್ರುತಿ ರಿಷಭ ರಿ3 | ಗ3 ಅಂತರ ಗಾಂಧಾರ |

ರಿ2 = ಗ1 , ರಿ3 = ಗ2

ಚತುಶ್ರುತಿ ರಿಷಭ ಮತ್ತು ಶುದ್ಧ ಗಾಂಧಾರ ಸ್ವರಗಳ ಸ್ಥಾನವು ಒಂದೇ ಆಗಿರುವುದರಿಂದ ಒಂದು ಚಕ್ರದಲ್ಲಿ ಬರಲು ಸಾಧ್ಯವಿಲ್ಲ. ಷಟ್‌ಶ್ರುತಿ ರಿಷಭ ಮತ್ತು ಸಾಧಾರಣ ಗಾಂಧಾರ ಸ್ವರಗಳ ಸ್ಥಾನವು ಒಂದೇ ಆಗಿರುವುದರಿಂದ ಒಂದು ಚಕ್ರದಲ್ಲಿ ಬರಲು ಸಾಧ್ಯವಿಲ್ಲ. ಷಟ್‌ಶ್ರುತಿ ರಿಷಭ ಸ್ವರದ ಸ್ಥಾನವು ಶುದ್ಧ ಗಾಂಧಾರ ಸ್ಥಾನಕ್ಕಿಂತ ಹೆಚ್ಚಾಗಿರುವುದರಿಂದ ಒಂದು ಚಕ್ರದಲ್ಲಿ ಈ ಸ್ವರಗಳು ಬರಲು ಸಾಧ್ಯವಿಲ್ಲ.

ಮೇಲಿನ ಕ್ರಮವನ್ನೇ ದೈವತ ಮತ್ತು ನಿಷಾದ ಸ್ವರಗಳು ಅನುಸರಿಸುತ್ತವೆ.

| | | |
|---|---|---|
| ಮೊದಲನೇ ರಾಗಕ್ಕೆ | ಶುದ್ಧ ದೈವತ | ಶುದ್ಧ ನಿಷಾದ |
| ಎರಡನೇ ರಾಗಕ್ಕೆ | ಶುದ್ಧ ದೈವತ | ಕೈಶಿಕಿ ನಿಷಾದ |
| ಮೂರನೇ ರಾಗಕ್ಕೆ | ಶುದ್ಧ ದೈವತ | ಕಾಕಲಿ ನಿಷಾದ |
| ನಾಲ್ಕನೇ ರಾಗಕ್ಕೆ | ಚತುಶ್ರುತಿ ದೈವತ | ಕೈಶಿಕಿ ನಿಷಾದ |
| ಐದನೇ ರಾಗಕ್ಕೆ | ಚತುಶ್ರುತಿ ದೈವತ | ಕಾಕಲಿ ನಿಷಾದ |
| ಆರನೇ ರಾಗಕ್ಕೆ | ಷಟ್‌ಶ್ರುತಿ ದೈವತ | ಕಾಕಲಿ ನಿಷಾದ |

ರಿಷಭ ಗಾಂಧಾರ ಸ್ವರಗಳಂತೆ, ದೈವತ, ನಿಷಾದಗಳಲ್ಲೂ
ಚತುಶ್ರುತಿ ದೈವತ, ಶುದ್ಧ ನಿಷಾದಗಳೂ,
ಷಟ್‌ಶ್ರುತಿ ದೈವತ, ಕೈಶಿಕಿ ನಿಷಾದಗಳೂ,
~~ಷಟ್‌ಶ್ರುತಿ ದೈವತ, ಶುದ್ಧ ನಿಷಾದಗಳೂ~~,
ಒಂದು ರಾಗದಲ್ಲಿ ಬರುವಂತಿಲ್ಲ.

ಶುದ್ಧ ಮಧ್ಯಮ ಚಕ್ರ




ಪ್ರತಿ ಮಧ್ಯಮ ಚಕ್ರ




ಪ್ರತಿಯೊಂದು ಚಕ್ರದ ಮೇಳಗಳ ಪೂರ್ವಾಂಗ ಸ್ವರಗಳು ಬದಲಾಗುವುದಿಲ್ಲ. ಉತ್ತರಾಂಗ ಸ್ವರಗಳು ಮಾತ್ರ ಬದಲಾಗುತ್ತವೆ. ಪ್ರತಿಯೊಂದು ಚಕ್ರದಲ್ಲೂ ದೈವತ ಮತ್ತು ನಿಷಾದ ಭೇದದಿಂದ ಆರು ಮೇಳಗಳು ಅಥವಾ ರಾಗಗಳು ಉಂಟಾಗುತ್ತವೆ. ಒಟ್ಟಿನಲ್ಲಿ ಎಪ್ಪತ್ತೆರಡು ಮೇಳ ರಚನಾಕ್ರಮದಲ್ಲಿ ಹನ್ನೆರಡು ಚಕ್ರಗಳಿದ್ದು, ಪ್ರತಿಯೊಂದು ಚಕ್ರದಲ್ಲೂ ಆರು ಮೇಳ ಅಥವಾ ರಾಗಗಳಿದ್ದು ಒಟ್ಟು ($12 \times 6 = 72$) ಎಪ್ಪತ್ತೆರಡು ಮೇಳಗಳಾಗಿವೆ. ಈ ಮೇಳಗಳಿಗೆ ಸಂಖ್ಯೆಯನ್ನೂ, ಹೆಸರನ್ನೂ ಕೊಡಲಾಗಿದೆ. ಚಕ್ರಗಳಿಗೆ ಸಂಖ್ಯಾ ಸೂಚಕವಾದ ಹೆಸರುಗಳನ್ನು ಸೂಚಿಸಲಾಗಿದೆ.

1ನೇ ಚಕ್ರ - ಇಂದು. ಒಬ್ಬನೇ ಚಂದ್ರ.

2ನೇಚಕ್ರ - ನೇತ್ರ. ಕಣ್ಣುಗಳು ಎರಡು.

3ನೇ ಚಕ್ರ - ಅಗ್ನಿ. ದಕ್ಷಿಣ ಆಹವನೀಯ ಗಾರ್ಹಪತ್ಯವೆಂಬ ಮೂರು ಅಗ್ನಿಗಳು.

4ನೇ ಚಕ್ರ - ವೇದ. ಋಕ್, ಯಜುರ್, ಸಾಮ, ಅಥರ್ವಣವೆಂಬ ನಾಲ್ಕು ವೇದಗಳು.

5ನೇ ಚಕ್ರ - ಬಾಣ. ಮನ್ಮಥನ ಐದು ಬಾಣಗಳು.

6ನೇ ಚಕ್ರ - ಋತು. ವಸಂತ, ಗ್ರೀಷ್ಮ, ವರ್ಷ, ಶರತ್, ಹೇಮಂತ, ಶಿಶಿರಗಳೆಂಬ ಆರು ಋತುಗಳು.

7ನೇ ಚಕ್ರ - ಋಷಿ. ಮರೀಚಿ, ಅತ್ರಿ, ಅಂಗೀರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ, ಸಪ್ತಋಷಿಗಳು.

8ನೇ ಚಕ್ರ - ವಸು. ಅಷ್ಟವಸುಗಳು.

9ನೇ ಚಕ್ರ - ಬ್ರಹ್ಮ. ಪ್ರಜಾಪತಿಗಳು ಒಂಭತ್ತು, ನವಬ್ರಹ್ಮರು.

10ನೇ ಚಕ್ರ - ದಿಶೆ. ಹತ್ತು ದಿಕ್ಕುಗಳು - ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮ, ಆಗ್ನೇಯ, ನೈರುತ್ಯ, ವಾಯುವ್ಯ, ಈಶಾನ್ಯ, ಆಕಾಶ, ಭೂಮಿ.

11ನೇ ಚಕ್ರ - ರುದ್ರ. ಏಕಾದಶ ರುದ್ರರು.

12ನೇ ಚಕ್ರ - ಆದಿತ್ಯ. ಹನ್ನೆರಡು ಸೂರ್ಯರು (ದ್ವಾದಶಾರ್ಕಾಃ).

**ವಿಕೃತಿ ಸ್ವರಗಳಿಗೆ ಸಂಕೇತಾಕ್ಷರಗಳನ್ನು ಕೊಡಲಾಗಿದೆ :-**

| | | | |
|---|---|---|---|
| ಶುದ್ಧ ರಿಷಭ | ರ | ಶುದ್ಧ ದೈವತ | ದ |
| ಚತುಶ್ರುತಿ ರಿಷಭ | ರಿ | ಚತುಶ್ರುತಿ ದೈವತ | ದಿ |
| ಷಟ್‌ಶ್ರುತಿ ರಿಷಭ | ರು | ಷಟ್‌ಶ್ರುತಿ ದೈವತ | ದು |
| ಶುದ್ಧ ಗಾಂಧಾರ | ಗ | ಶುದ್ಧ ನಿಷಾದ | ನ |
| ಸಾಧಾರಣ ಗಾಂಧಾರ | ಗಿ | ಕೈಶಿಕಿ ನಿಷಾದ | ನಿ |
| ಅಂತರ ಗಾಂಧಾರ | ಗು | ಕಾಕಲಿ ನಿಷಾದ | ನು |
| ಶುದ್ಧ ಮಧ್ಯಮ | ಮ | | |
| ಪ್ರತಿ ಮಧ್ಯಮ | ಮಿ | | |

ಪ್ರತಿಯೊಂದು ಚಕ್ರದ ಮೇಳ ಸಂಖ್ಯೆಯನ್ನು ತಿಳಿಸಲು

| | | |
|---|---|---|
| ಮೊದಲನೇ ಮೇಳ | - | ಪಾ |
| ಎರಡನೇ ಮೇಳ | - | ಶ್ರೀ |
| ಮೂರನೇ ಮೇಳ | - | ಗೋ |
| ನಾಲ್ಕನೇ ಮೇಳ | - | ಭೂ |
| ಐದನೇ ಮೇಳ | - | ಮಾ |
| ಆರನೇ ಮೇಳ | - | ಷಾ |

ಎಂಬ ಸಂಕೇತವನ್ನು ಕಟಪಯಾದಿ ಸೂತ್ರಕ್ಕನುಗುಣವಾಗಿ ಕೊಡಲಾಗಿದೆ.

## 72 ಮೇಳ ರಚನಾಕ್ರಮದ ನಕ್ಷೆ

| ಚಕ್ರ ಸಂಖ್ಯೆ | ಅಚಲ ಸ್ವರ ಸ | ಪೂರ್ವಾಂಗಸ್ವರ ಸಂಕೇತದೊಡನೆ ರಿಗ | ಮಧ್ಯ ಸ್ವರ ಮ | ರಾಗ ಸಂಖ್ಯೆ | ಅಚಲ ಸ್ವರ ಪ | ಉತ್ತರಾಂಗ ಸ್ವರ ಸಂಕೇತದೊಡನೆ ದ ನಿ |
|---|---|---|---|---|---|---|

1. ಶು: ರಿ; ಶು : ಗಾ; (ರಗ)
2. ಶು: ರಿ; ಸಾ : ಗಾ; (ರಗಿ)
3. ಶು: ರಿ; ಅಂ : ಗಾ; (ರಗು)
4. ಚ : ರಿ; ಸಾ : ಗಾ; (ರಿಗಿ)
5. ಚ: ರಿ; ಅಂ : ಗಾ; (ರಿಗು)
6. ಷ: ರಿ; ಅಂ : ಗಾ; (ರುಗು)

1. ಶು : ದ; ಶು : ನಿ (ದ ನ)
2. ಶು : ದ; ಕೈ : ನಿ (ದ ನಿ)
3. ಶು : ದ; ಕಾ : ನಿ (ದ ನು)
4. ಚ : ದ; ಕೈ : ನಿ (ದಿ ನಿ)
5. ಚ : ದ; ಕಾ : ನಿ (ದಿನು)
6. ಷ : ದ; ಕಾ : ನಿ (ದು ನು)

ಶುದ್ಧ ಮಧ್ಯಮ ಮೇಳಗಳು    ಪ್ರತಿಮಧ್ಯಮ ಮೇಳಗಳು

### 72 ಮೇಳಗಳ ಸಂಖ್ಯೆ ಮತ್ತು ಹೆಸರು

### ಚಕ್ರಗಳ ಸಂಖ್ಯೆ ಮತ್ತು ಹೆಸರು

### ಸ್ವರ, ರಾಗ ಸಂಕೇತಗಳು.

### ಶುದ್ಧ ಮಧ್ಯಮ ಮೇಳಗಳು ಅಥವಾ ಪೂರ್ವಾಂಗ ಮೇಳಗಳು

| ಚಕ್ರದ ಸಂಖ್ಯೆ ಮತ್ತು ಹೆಸರು | ಪೂರ್ವಾಂಗ ಸ್ವರಗಳು | ಉತ್ತರಾಂಗ ಸ್ವರಗಳು ಮತ್ತು ಸಂಕೇತ | ಮೇಳ ಸಂಖ್ಯೆ | ಮೇಳದ ಹೆಸರು ಸಂಪೂರ್ಣ ಮೇಳ ಪದ್ಧತಿ | ಮೇಳದ ಹೆಸರು ಅಸಂಪೂರ್ಣ ಮೇಳ ಪದ್ಧತಿ |
|---|---|---|---|---|---|
| 1 ಇಂದು | ರಗ | ದನ ಪಾ | 1 | ಕನಕಾಂಗಿ | ಕನಕಾಂಬರಿ |
| | | ದನಿ ಶ್ರೀ | 2 | ರತ್ನಾಂಗಿ | ಫೇನದ್ಯುತಿ |
| | | ದನು ಗೋ | 3 | ಗಾನಮೂರ್ತಿ | ಗಾನಸಾಮವರಾಳಿ |
| | | ದಿನಿ ಭೂ | 4 | ವನಸ್ಪತಿ | ಭಾನುಮತಿ |
| | | ದಿನು ಮಾ | 5 | ಮಾನವತಿ | ಮನೋರಂಜನಿ |
| | | ದುನು ಷಾ | 6 | ತಾನರೂಪಿ | ತನುಕೀರ್ತಿ |

| ಚಕ್ರದ ಸಂಖ್ಯೆ ಮತ್ತು ಹೆಸರು | ಪೂರ್ವಾಂಗ ಸ್ವರಗಳು | ಉತ್ತರಾಂಗ ಸ್ವರಗಳು ಮತ್ತು ಸಂಕೇತ | ಮೇಳ ಸಂಖ್ಯೆ | ಮೇಳದ ಹೆಸರು ಸಂಪೂರ್ಣ ಮೇಳ ಪದ್ಧತಿ | ಮೇಳದ ಹೆಸರು ಅಸಂಪೂರ್ಣ ಮೇಳ ಪದ್ಧತಿ |
|---|---|---|---|---|---|
| 2 ನೇತ್ರ | ರಗಿ | ದನ ಪಾ | 7 | ಸೇನಾವತಿ | ಸೇನಾಗ್ರಣಿ |
| | | ದನಿ ಶ್ರೀ | 8 | ಹನುಮತೋಡಿ | ಜನತೋಡಿ |
| | | ದನು ಗೋ | 9 | ಧೇನುಕ | ಧುನಿಭಿನ್ನಷಡ್ಜ |
| | | ದಿನಿ ಭೂ | 10 | ನಾಟಕಪ್ರಿಯ | ನಟಾಭರಣ |
| | | ದಿನು ಮಾ | 11 | ಕೋಕಿಲಪ್ರಿಯ | ಕೋಕಿಲಾರವ |
| | | ದುನು ಷಾ | 12 | ರೂಪವತಿ | ರೂಪವತಿ |
| 3 ಅಗ್ನಿ | ರಗು | ದನ ಪಾ | 13 | ಗಾಯಕಪ್ರಿಯ | ಗೇಯಹೆಜ್ಜಜ್ಜಿ |
| | | ದನಿ ಶ್ರೀ | 14 | ವಕುಳಾಭರಣ | ವಾಟಿವಸಂತ ಭೈರವಿ |
| | | ದನು ಗೋ | 15 | ಮಾಯಾಮಾಳವಗೌಳ | ಮಾಯಾಮಾಳವಗೌಳ |
| | | ದಿನಿ ಭೂ | 16 | ಚಕ್ರವಾಕ | ತೋಯವೇಗವಾಹಿನಿ |
| | | ದಿನು ಮಾ | 17 | ಸೂರ್ಯಕಾಂತ | ಛಾಯಾವತಿ |
| | | ದುನು ಷಾ | 18 | ಹಾಟಕಾಂಬರಿ | ಜಯಶುದ್ಧಮಾಳವಿ |
| 4 ವೇದ | ರಿಗಿ | ದನ ಪಾ | 19 | ಝಂಕಾರಧ್ವನಿ | ಝಂಕಾರಭ್ರಮರಿ |
| | | ದನಿ ಶ್ರೀ | 20 | ನಠಭೈರವಿ | ನಾರೀ ರೀತಿಗೌಳ |
| | | ದನು ಗೋ | 21 | ಕೀರವಾಣಿ | ಕಿರಣಾವಳಿ |
| | | ದಿನಿ ಭೂ | 22 | ಖರಹರಪ್ರಿಯ | ಶ್ರೀರಾಗ |
| | | ದಿನು ಮಾ | 23 | ಗೌರಿಮನೋಹರಿ | ಗೌರಿ ವೇಳಾವಳಿ |
| | | ದುನು ಷಾ | 24 | ವರುಣಪ್ರಿಯ | ವೀರವಸಂತ |
| 5 ಬಾಣ | ರಿಗು | ದನ ಪಾ | 25 | ಮಾರರಂಜಿನಿ | ಶರಾವತಿ |
| | | ದನಿ ಶ್ರೀ | 26 | ಚಾರುಕೇಶಿ | ತರಂಗಿಣಿ |
| | | ದನು ಗೋ | 27 | ಸರಸಾಂಗಿ | ಸೌರಸೇನ |
| | | ದಿನಿ ಭೂ | 28 | ಹರಿಕಾಂಬೋಜಿ | ಹರಿಕೇದಾರಗೌಳ |
| | | ದಿನು ಮಾ | 29 | ಧೀರಶಂಕರಾಭರಣ | ಧೀರಶಂಕರಾಭರಣ |
| | | ದುನು ಷಾ | 30 | ನಾಗಾನಂದಿನಿ | ನಾಗಾಭರಣ |
| 6 ಋತು | ರುಗು | ದನ ಪಾ | 31 | ಯಾಗಪ್ರಿಯ | ಕಲಾವತಿ |
| | | ದನಿ ಶ್ರೀ | 32 | ರಾಗವರ್ಧಿನಿ | ರಾಗಚೂಡಾಮಣಿ |
| | | ದನು ಗೋ | 33 | ಗಾಂಗೇಯಭೂಷಿಣಿ | ಗಂಗಾತರಂಗಿಣಿ |
| | | ದಿನಿ ಭೂ | 34 | ವಾಗಧೀಶ್ವರಿ | ಭೋಗಚ್ಛಾಯಾವತಿ |
| | | ದಿನು ಮಾ | 35 | ಶೂಲಿನಿ | ಶೈಲ ದೇಶಾಕ್ಷಿ |
| | | ದುನು ಷಾ | 36 | ಚಲನಾಟ | ಚಲನಾಟ |

## ಉತ್ತರಾಂಗ ಮೇಳ ಅಥವಾ ಪ್ರತಿ ಮಧ್ಯಮ ಮೇಳಗಳು

| ಚಕ್ರದ ಸಂಖ್ಯೆ ಮತ್ತು ಹೆಸರು | ಪೂರ್ವಾಂಗ ಸ್ವರಗಳು | ಉತ್ತರಾಂಗ ಸ್ವರಗಳು ಮತ್ತು ಸಂಕೇತ | ಮೇಳ ಸಂಖ್ಯೆ | ಮೇಳದ ಹೆಸರು ಸಂಪೂರ್ಣ ಮೇಳ ಪದ್ಧತಿ | ಮೇಳದ ಹೆಸರು ಅಸಂಪೂರ್ಣ ಮೇಳ ಪದ್ಧತಿ |
|---|---|---|---|---|---|
| 7 ಋಷಿ | $_1$ರಗ$_1$ | $_1$ದನ$_1$ ಪಾ | 37 | ಸಾಲಗ | ಸೌಗಂಧಿನಿ |
| | | $_1$ದನಿ$_2$ ಶ್ರೀ | 38 | ಜಲಾರ್ಣವ | ಜಗನ್ಮೋಹನ |
| | | $_1$ದನು$_3$ ಗೋ | 39 | ಝಾಲವರಾಳಿ | ಧಾಲಿವರಾಳಿ |
| | | $_2$ದಿನಿ$_2$ ಭೂ | 40 | ನವನೀತ | ನಭೋಮಣಿ |
| | | $_2$ದಿನು$_3$ ಮಾ | 41 | ಪಾವನಿ | ಕುಂಭಿನಿ |
| | | $_3$ದುನು$_3$ ಷಾ | 42 | ರಘುಪ್ರಿಯ | ರವಿಪ್ರಿಯ |
| 8 ವಸು | $_1$ರಗಿ$_2$ | $_1$ದನ$_1$ ಪಾ | 43 | ಗವಾಂಬೋಧಿ | ಗೀರ್ವಾಣಿ |
| | | $_1$ದನಿ$_2$ ಶ್ರೀ | 44 | ಭವಪ್ರಿಯ | ಭವಾನಿ |
| | | $_1$ದನು$_3$ ಗೋ | 45 | ಶುಭಪಂತುವರಾಳಿ | ಶಿವಪಂತುವರಾಳಿ |
| | | $_2$ದಿನಿ$_2$ ಭೂ | 46 | ಷಡ್ವಿಧಮಾರ್ಗಿಣಿ | ಸ್ತವರಾಜ |
| | | $_2$ದಿನು$_3$ ಮಾ | 47 | ಸುವರ್ಣಾಂಗಿ | ಸೌವೀರ |
| | | $_3$ದುನು$_3$ ಷಾ | 48 | ದಿವ್ಯಮಣಿ | ಜೀವಂತಿನಿ |
| 9 ಬ್ರಹ್ಮ | $_1$ರಗು$_3$ | $_1$ದನ$_1$ ಪಾ | 49 | ಧವಳಾಂಬರಿ | ಧವಳಾಂಗ |
| | | $_1$ದನಿ$_2$ ಶ್ರೀ | 50 | ನಾಮನಾರಾಯಣಿ | ನಾಮದೇಶಿ |
| | | $_1$ದನು$_3$ ಗೋ | 51 | ಕಾಮವರ್ಧಿನಿ | ಕಾಶಿರಾಮಕ್ರಿಯ |
| | | $_2$ದಿನಿ$_2$ ಭೂ | 52 | ರಾಮಪ್ರಿಯ | ರಮಾಮನೋಹರಿ |
| | | $_2$ದಿನು$_3$ ಮಾ | 53 | ಗಮನಶ್ರಮ | ಗಮಕಕ್ರಿಯ |
| | | $_3$ದುನು$_3$ ಷಾ | 54 | ವಿಶ್ವಂಭರಿ | ವಂಶವತಿ |

## ಉತ್ತರಾಂಗ ಮೇಳ ಅಥವಾ ಪ್ರತಿ ಮಧ್ಯಮ ಮೇಳಗಳು

| ಚಕ್ರದ ಸಂಖ್ಯೆ ಮತ್ತು ಹೆಸರು | ಪೂರ್ವಾಂಗ ಸ್ವರಗಳು | ಉತ್ತರಾಂಗ ಸ್ವರಗಳು ಮತ್ತು ಸಂಕೇತ | ಮೇಳ ಸಂಖ್ಯೆ | ಮೇಳದ ಹೆಸರು ಸಂಪೂರ್ಣ ಮೇಳ ಪದ್ಧತಿ | ಮೇಳದ ಹೆಸರು ಅಸಂಪೂರ್ಣ ಮೇಳ ಪದ್ಧತಿ |
|---|---|---|---|---|---|
| 10 ದಿಶಿ | $_2$ರಿಗಿ$_2$ | $_1$ದನ$_1$ ಪಾ | 55 | ಶ್ಯಾಮಲಾಂಗಿ | ಶಾಮಳ |
| | | $_1$ದನಿ$_2$ ಶ್ರೀ | 56 | ಷಣ್ಮುಖಪ್ರಿಯ | ಚಾಮರ |
| | | $_1$ದನು$_3$ ಗೋ | 57 | ಸಿಂಹೇಂದ್ರ ಮಧ್ಯಮ | ಸುಮದ್ಯುತಿ |
| | | $_2$ದಿನಿ$_2$ ಭೂ | 58 | ಹೇಮವತಿ | ದೇಶಿಸಿಂಹಾರವ |
| | | $_2$ದಿನು$_3$ ಮಾ | 59 | ಧರ್ಮವತಿ | ಧಾಮವತಿ |
| | | $_3$ದುನು$_3$ ಷಾ | 60 | ನೀತಿಮತಿ | ನಿಷಾದ |
| 11 ರುದ್ರ | $_2$ರಿಗು$_3$ | $_1$ದನ$_1$ ಪಾ | 61 | ಕಾಂತಾಮಣಿ | ಕುಂತಲ |
| | | $_1$ದನಿ$_2$ ಶ್ರೀ | 62 | ರಿಷಭಪ್ರಿಯ | ರತಿಪ್ರಿಯ |
| | | $_1$ದನು$_3$ ಗೋ | 63 | ಲತಾಂಗಿ | ಗೀತಪ್ರಿಯ |
| | | $_2$ದಿನಿ$_2$ ಭೂ | 64 | ವಾಚಸ್ಪತಿ | ಭೂಷಾವತಿ |
| | | $_2$ದಿನು$_3$ ಮಾ | 65 | ಮೇಚಕಲ್ಯಾಣಿ | ಶಾಂತಕಲ್ಯಾಣಿ |
| | | $_3$ದುನು$_3$ ಷಾ | 66 | ಚಿತ್ರಾಂಬರಿ | ಚತುರಂಗಿಣಿ |
| 12 ಆದಿತ್ಯ | $_3$ರುಗು$_3$ | $_1$ದನ$_1$ ಪಾ | 67 | ಸುಚರಿತ್ರ | ಸಂತಾನಮಂಜರಿ |
| | | $_1$ದನಿ$_2$ ಶ್ರೀ | 68 | ಜ್ಯೋತಿಸ್ವರೂಪಿಣಿ | ಜ್ಯೋತಿರಾಗ |
| | | $_1$ದನು$_3$ ಗೋ | 69 | ಧಾತುವರ್ಧಿನಿ | ಧೌತ ಪಂಚಮ |
| | | $_2$ದಿನಿ$_2$ ಭೂ | 70 | ನಾಸಿಕಾಭೂಷಿಣಿ | ನಾಸಾಮಣಿ |
| | | $_2$ದಿನು$_3$ ಮಾ | 71 | ಕೋಸಲ | ಕುಸುಮಾಕರ |
| | | $_3$ದುನು$_3$ ಷಾ | 72 | ರಸಿಕಪ್ರಿಯ | ರಸಮಂಜರಿ |

### ಕಟಪಯಾದಿ ಸೂತ್ರ :

ಎಪ್ಪತ್ತೆರಡು ಮೇಳಗಳ ಹೆಸರುಗಳನ್ನು ಮೇಳಗಳ ಕ್ರಮಸಂಖ್ಯೆಗೆ ಅನುಗುಣವಾಗಿ ಕೊಡಲಾಗಿದೆ. ಈ ಮೇಳಗಳ ಕ್ರಮಸಂಖ್ಯೆಯನ್ನು ಮೇಳಗಳ ಹೆಸರಿನ ಮೂಲಕ ತಿಳಿದುಕೊಳ್ಳುವ ಸೂತ್ರವೇ ಕಟಪಯಾದಿ ಸೂತ್ರ. ಈ ಸೂತ್ರವನ್ನು ಸಂಸತ ವರ್ಣಮಾಲೆಯ ವ್ಯಂಜನಾಕ್ಷರಗಳ ಆಧಾರದ ಮೇಲೆ ಸಂಯೋಜಿಸಲಾಗಿದೆ. ಮೇಳದ ಹೆಸರಿನ ಮೊದಲ ಎರಡು ಅಕ್ಷರಗಳನ್ನು ಈ ಸೂತ್ರಕ್ಕೆ ಹೊಂದುವಂತೆ ಕಲ್ಪಿಸಲಾಗಿದೆ. ಈ ಸೂತ್ರವೇ ಕಾದಿನವ, ಟಾದಿನವ, ಪಾದಿಪಂಚ, ಯಾದ್ಯಷ್ಟ. ಪ್ರತಿಯೊಂದು ವ್ಯಂಜನಾಕ್ಷರವೂ ಈ ಸೂತ್ರಕ್ಕೆ ಅನುಸಾರವಾಗಿ ಸಂಖ್ಯೆಯನ್ನು ಪಡೆಯುತ್ತದೆ.

ಕಾದಿನವ : ಕ ಅಕ್ಷರದಿಂದ ಮೊದಲುಗೊಂಡು ಒಂಭತ್ತು ಅಕ್ಷರಗಳು.

ಟಾದಿನವ : ಟ ಅಕ್ಷರದಿಂದ ಮೊದಲುಗೊಂಡು ಒಂಭತ್ತು ಅಕ್ಷರಗಳು.

ಪಾದಿಪಂಚ : ಪ ಅಕ್ಷರದಿಂದ ಮೊದಲುಗೊಂಡು ಐದು ಅಕ್ಷರಗಳು.

ಯಾದ್ಯಷ್ಟ : ಯ ಅಕ್ಷರದಿಂದ ಮೊದಲುಗೊಂಡು ಎಂಟು ಅಕ್ಷರಗಳು.

### ಕಟಪಯಾದಿ ಸೂತ್ರದಲ್ಲಿ ವ್ಯಂಜನಾಕ್ಷರಗಳಿಗೆ ಕೊಟ್ಟಿರುವ ಸಂಖ್ಯೆ

| ಕಟಪಯಾದಿ ಸೂತ್ರ | 1 | 2 | 3 | 4 | 5 | 6 | 7 | 8 | 9 | 0 |
|---|---|---|---|---|---|---|---|---|---|---|
| ಕಾ ದಿ ನ ವ | ಕ | ಖ | ಗ | ಘ | ಙ | ಚ | ಛ | ಜ | ಝ | ಞ |
| ಟಾ ದಿ ನ ವ | ಟ | ಠ | ಡ | ಢ | ಣ | ತ | ಥ | ದ | ಧ | ನ |
| ಪಾ ದಿ ಪಂಚ | ಪ | ಫ | ಬ | ಭ | ಮ | | | | | |
| ಯಾದ್ಯಷ್ಟ | ಯ | ರ | ಲ | ವ | ಶ | ಷ | ಸ | ಹ | | |

### ಕಟಪಯಾದಿ ಸೂತ್ರಕ್ಕೆ ಕೆಲವು ಪ್ರತಿಷೇಧಗಳಿವೆ. ಅವು :

1. ಸಂಯುಕ್ತಾಕ್ಷರಗಳಿಂದ ಕೂಡಿರುವ ಪದಗಳಲ್ಲಿ, ಸಂಯುಕ್ತಾಕ್ಷರದ ಅಂತ್ಯ ವ್ಯಂಜನವನ್ನು ತೆಗೆದುಕೊಳ್ಳಲಾಗುತ್ತದೆ. ಉದಾಹರಣೆಗೆ : ರತ್ನಾಂಗಿ ಎಂಬ ಜನಕ ರಾಗದ ಹೆಸರಿನ ಮೊದಲೆರಡು ಅಕ್ಷರಗಳು "ರತ್ನ" ಎಂದಾಗುತ್ತದೆ. ಇಲ್ಲಿ ರ ಮತ್ತು ನ ಅಕ್ಷರಗಳನ್ನು ತೆಗೆದುಕೊಳ್ಳಲಾಗುವುದು. ಸೂರ್ಯಕಾಂತಿ, ಝುಂಕಾರ ಧ್ವನಿ, ಗಾಂಗೇಯ ಭೂಷಣಿ, ಷಡ್ವಿಧಮಾರ್ಗಿಣಿ, ಷಣ್ಮುಖಪ್ರಿಯ, ಧರ್ಮವತಿ ಮತ್ತು ಕಾಂತಾಮಣಿ ಮೇಳಗಳು ಈ ಕ್ರಮವನ್ನು ಅನುಸರಿಸುತ್ತವೆ.

2. ಸಂಯುಕ್ತಾಕ್ಷರದ ಪದಗಳಲ್ಲಿ ಸಂಯುಕ್ತಾಕ್ಷರದ ಮೊದಲನೇ ಅಕ್ಷರವನ್ನು ತೆಗೆದುಕೊಳ್ಳಲಾಗುವುದು. ಉದಾಹರಣೆಗೆ ಚಕ್ರವಾಕ ಮೇಳದಲ್ಲಿ ಚ ಮತ್ತು ಕ ಅಕ್ಷರಗಳನ್ನು ತೆಗೆದುಕೊಳ್ಳಲಾಗುತ್ತದೆ. ದಿವ್ಯಮಣಿ, ವಿಶ್ವಂಭರಿ, ಶ್ಯಾಮಲಾಂಗಿ, ಸಿಂಹೇಂದ್ರಮಧ್ಯಮ, ಚಿತ್ರಾಂಬರಿ, ಜ್ಯೋತಿಸ್ವರೂಪಿಣಿ ಮೇಳಗಳಲ್ಲಿ ಈ ಕ್ರಮವನ್ನು ಅನುಸರಿಸಲಾಗುತ್ತದೆ.

### ಮೇಳ ಸಂಖ್ಯೆಯನ್ನು ಕಂಡುಹಿಡಿಯುವ ಕ್ರಮ

ಜನಕ ರಾಗ ಅಥವಾ ಮೇಳದ ಹೆಸರಿನ ಮೊದಲೆರಡು ಅಕ್ಷರಗಳನ್ನು ತೆಗೆದುಕೊಳ್ಳಬೇಕು. ಕಟಪಯಾದಿ ಸೂತ್ರಕ್ಕನುಸಾರವಾಗಿ ವ್ಯಂಜನಾಕ್ಷರದ ಸಂಖ್ಯೆಯನ್ನು ಗುರುತಿಸಬೇಕು. (ವ್ಯಂಜನಾಕ್ಷರವು ಸ್ವರಾಕ್ಷರದ ಯಾವ ರೂಪವನ್ನಾದರೂ ಹೊಂದಿರಬಹುದು. ಉದಾಹರಣೆಗೆ **ಕ, ಕಿ, ಕು, ಕೇ, ಕೋ** ಎಂದಿದ್ದರೆ, ಕ ಕಾರವನ್ನು ತೆಗೆದುಕೊಳ್ಳಬೇಕು.) ಬಂದ ಸಂಖ್ಯೆಯ ಸ್ಥಾನವನ್ನು ಅದಲು ಬದಲು ಮಾಡಿದಾಗ ಬರುವ ಸಂಖ್ಯೆಯೇ ಮೇಳಸಂಖ್ಯೆ.

ಉದಾಹರಣೆಗೆ ಕೀರವಾಣಿ ಮೇಳದಲ್ಲಿ ಮೊದಲೆರಡು ಅಕ್ಷರಗಳು ಕ ಮತ್ತು ರ. ಕಾದಿನವದಲ್ಲಿ ಕ ಮೊದಲನೇ ಸಂಖ್ಯೆ. ಯಾದ್ಯಷ್ಟದಲ್ಲಿ ರ ಎರಡನೇ ಸಂಖ್ಯೆ. ಬರುವ ಸಂಖ್ಯೆ 12. ಸ್ಥಾನಪಲ್ಲಟ ಮಾಡಿದಾಗ ಬರುವ ಸಂಖ್ಯೆ 21. ಇದೇ ಕೀರವಾಣಿಯ ಮೇಳ ಸಂಖ್ಯೆ.



# ಅಧ್ಯಾಯ - 4

## ಜನಕ ಮತ್ತು ಜನ್ಯ ರಾಗಗಳು

### ರಾಗ :

ಯೋಽಸೌಧ್ವನಿ ವಿಶೇಷಸ್ತು ಸ್ವರವರ್ಣ ವಿಭೂಷಿತಃ
ರಂಜಕೋ ಜನಚಿತ್ತಾನಾಂ ಸಚರಾಗ ಉದಾಹೃತಃ
- ಮತಂಗನ ಬೃಹದ್ದೇಶಿ.

ಯೋಽಸೌಧ್ವನಿ ವಿಶೇಷಸ್ತು ಸ್ವರವರ್ಣ ವಿಭೂಷಿತಃ
ರಂಜಕೋ ಜನಚಿತ್ತಾನಾಂ ಸರಾಗಃ ಕಥಿತೋ ಬುಧೈಃ
- ಸಂಗೀತ ರತ್ನಾಕರ - ಶಾರ್ಙ್ಗದೇವ.

ಕೇಳುವವರ ಮನಸ್ಸಿಗೆ ಆನಂದವನ್ನು ಕೊಡುವ ಸ್ವರವರ್ಣಗಳಿಂದ ಕೂಡಿರುವ ವಿಶೇಷವಾದ ಧ್ವನಿಯೇ ರಾಗ.

ರಂಜಕಃ ಸ್ವರ ಸಂದರ್ಭೋ ರಾಗ ಇತ್ಯಭಿಧೀಯತೆ.
- ಸಂಗೀತ ಪಾರಿಜಾತ - ಅಹೋಬಲ.

ಆನಂದವನ್ನು ಕೊಡುವ ಸ್ವರಗಳ ಗುಚ್ಛಕ್ಕೆ ರಾಗವೆಂದು ಹೇಳಲಾಗಿದೆ.

ಭಾರತೀಯ ಸಂಗೀತದ ವೈಶಿಷ್ಟ್ಯವೇ ರಾಗ. ಅದರಲ್ಲೂ ಕರ್ನಾಟಕ ಸಂಗೀತದಲ್ಲಿ ಕಂಡುಬರುವಷ್ಟು ರಾಗಗಳು ಪ್ರಪಂಚದ ಯಾವುದೇ ಸಂಗೀತ ಪದ್ಧತಿಯಲ್ಲಿ ಕಂಡು ಬರುವುದಿಲ್ಲ. ರಾಗದ ಕಲ್ಪನೆಯಲ್ಲಿ ಭಾರತೀಯ ಸಂಗೀತವು ಪರಿಪೂರ್ಣತೆಯನ್ನು ಪಡೆಯುತ್ತದೆ. ಭಾರತೀಯ ಸಂಗೀತದ ಕಲಶವೇ ಈ ಸಮೃದ್ಧವಾದ ರಾಗಭಂಡಾರ. ಮಾಧುರ್ಯ ಪ್ರಧಾನವಾದ ರಾಗಗಳೇ ಭಾರತೀಯ ಸಂಗೀತದ ಭೂಮಿಕೆ.

ಸಪ್ತಸ್ವರಗಳ ಭೇದಗಳನ್ನು ಕ್ರಮವಾಗಿ ಹಲವಾರು ರೀತಿಯಲ್ಲಿ ಹೊಂದಿಸಿದಾಗ ಉಂಟಾಗುವ ಬೇರೆ ಬೇರೆ ರೂಪಗಳ ಛಾಯೆಯೇ ರಾಗ. ರಾಗಗಳು ತಮ್ಮ ಸ್ವರೂಪವನ್ನು ನಿರ್ದಿಷ್ಟವಾದ ಸ್ವರಗಳ ಹೊಂದಾಣಿಕೆಯಿಂದ ಪಡೆಯುತ್ತದೆ. ಕರ್ನಾಟಕ ಸಂಗೀತದಲ್ಲಿ ಪ್ರತಿಯೊಂದು ರಾಗದ ಸ್ವರೂಪ ಮತ್ತು ಸಂಚಾರಕ್ರಮಗಳು ನಿರ್ಧಾರವಾಗಿದೆ. ಷಡ್ಜಸ್ವರವಿಲ್ಲದ ರಾಗವಿಲ್ಲ. ರಾಗವು ಪೂರ್ಣವಾಗಲು ಷಡ್ಜಸ್ವರದ ಸಂವಾದಿಯಾದ ಮಧ್ಯಮವಾಗಲೀ ಅಥವಾ ಪಂಚಮವಾಗಲೀ ಅಗತ್ಯವಾಗಿ ಇರಲೇಬೇಕು. ರಾಗವು ಪರಿಪೂರ್ಣವೆನಿಸಲು ಆರೋಹಣ, ಅವರೋಹಣದಲ್ಲಿ ಕೊನೆಯ ಪಕ್ಷ ಐದು ಸ್ವರಗಳಾದರೂ ಇರಬೇಕು. ಒಂದು ರಾಗದ ಆರೋಹಣದಲ್ಲಿ ನಾಲ್ಕು ಸ್ವರಗಳಿದ್ದರೆ ಆ ರಾಗದ ಅವರೋಹಣದಲ್ಲಿ ಐದು ಸ್ವರಗಳಿರಬೇಕು. ಅಂತೆಯೇ ಅವರೋಹಣದಲ್ಲಿ ನಾಲ್ಕು ಸ್ವರಗಳಿದ್ದರೆ ಆರೋಹಣದಲ್ಲಿ ಐದು ಸ್ವರಗಳಿರಬೇಕು. ಇತ್ತೀಚೆಗೆ ನಾಲ್ಕು ಸ್ವರಗಳ ರಾಗ ಸೃಷ್ಟಿಯು ನಡೆದಿದ್ದು ಸ್ವರಗಳ ಪುನರುಕ್ತಿಯೇ ಹೆಚ್ಚಾಗಿ ಭಾವವಿಲ್ಲದಿರುವುದು ಕಂಡುಬಂದಿದೆ. ರಾಗಗಳು **ಜನಕರಾಗ** ಮತ್ತು **ಜನ್ಯರಾಗ**ವೆಂಬುದಾಗಿ ಎರಡು ವಿಧವಾಗಿವೆ.

### ಜನಕರಾಗ :

ಇದನ್ನು ಮೇಳರಾಗ, ಮೇಳಕರ್ತರಾಗ, ರಾಗಾಂಗ ರಾಗ, ಸಂಪೂರ್ಣ ರಾಗವೆಂದೂ ಕರೆಯಲಾಗಿದೆ. ಜನಕರಾಗಗಳು ಆರೋಹಣ ಮತ್ತು ಅವರೋಹಣಗಳಲ್ಲಿ ಸಪ್ತಸ್ವರಗಳನ್ನು ಹೊಂದಿರುತ್ತವೆ. ಸ್ವರಗಳ ಸ್ಥಾನಗಳು ಆರೋಹಣ ಮತ್ತು ಅವರೋಹಣಗಳಲ್ಲಿ ಕ್ರಮವಾಗಿರುತ್ತವೆ. ಆರೋಹಣದಲ್ಲಿ ಬರುವ ಸ್ವರಗಳೇ ಅವರೋಹಣದಲ್ಲೂ ಬರುತ್ತದೆ. ಇಂತಹ ಜನಕರಾಗಗಳು ಎಪ್ಪತ್ತೆರಡು ಇವೆ.

ಉದಾ : ಮಾಯಾಮಾಳವಗೌಳ.

## ಜನ್ಯರಾಗ :

ಜನಕರಾಗದಲ್ಲಿ ಉದ್ಭವಿಸುವ ರಾಗಗಳಿಗೆ **ಜನ್ಯರಾಗ**ವೆಂದು ಹೆಸರು. ಜನ್ಯರಾಗಗಳಲ್ಲಿ ಆರೋಹಣ ಅಥರಾ ಅವರೋಹಣ ಅಥವಾ ಎರಡರಲ್ಲೂ ಒಂದು ಎರಡು ಸ್ವರಗಳು ಬಿಟ್ಟುಹೋಗಿರುತ್ತವೆ. ಒಂದು ವೇಳೆ ಸಪ್ತಸ್ವರಗಳೂ ಬಂದಲ್ಲಿ ಆರೋಹಣದಲ್ಲಿ ಬರುವ ಸ್ವರಗಳಲ್ಲಿ ಒಂದು ಅಥವಾ ಎರಡು ಸ್ವರಗಳ ಸ್ಥಾನವು ಅವರೋಹಣದಲ್ಲಿ ವ್ಯತ್ಯಾಸವಾಗಿರುತ್ತದೆ. ಉದಾಹರಣೆಗೆ ಭೈರವಿ ರಾಗದಲ್ಲಿ ಆರೋಹಣದಲ್ಲಿ ಚತುಶ್ರುತಿ ದೈವತವೂ, ಅವರೋಹಣದಲ್ಲಿ ಶುದ್ಧ ದೈವತವೂ ಬರುತ್ತದೆ. ಕೆಲವು ವೇಳೆ ಸಪ್ತಸ್ವರಗಳು ಆರೋಹಣ ಅವರೋಹಣದಲ್ಲಿ ಬಂದಲ್ಲಿ ಸಂಚಾರವು ವಕ್ರವಾಗಿರುತ್ತದೆ. ಪ್ರತಿಯೊಂದು ಜನ್ಯರಾಗವೂ ತನ್ನ ಜನಕರಾಗದ ಸ್ವರಗಳನ್ನು ಹೊಂದಿರುತ್ತದೆ.

## ಜನ್ಯರಾಗಗಳ ವರ್ಗೀಕರಣ :

### ವರ್ಜ್ಯರಾಗ :

ಆರೋಹಣ ಅಥವಾ ಅವರೋಹಣದಲ್ಲಿ ಅಥವಾ ಎರಡರಲ್ಲೂ ಸ್ವರಗಳು ಬಿಟ್ಟು ಹೋಗಿರುವ ಜನ್ಯ ರಾಗಗಳನ್ನು **ವರ್ಜ್ಯರಾಗ**ವೆನ್ನುತ್ತಾರೆ. ಆರೋಹಣ, ಅವರೋಹಣಗಳಲ್ಲಿ ಬರುವ ಸ್ವರಗಳಿಗನುಗುಣವಾಗಿ ಜನ್ಯರಾಗವನ್ನು ಎಂಟು ವಿಧಗಳಾಗಿ ವಿಂಗಡಿಸಲಾಗಿದೆ. ಇದಕ್ಕೆ ಆಧಾರ, ಸಂಪೂರ್ಣ, ಷಾಡವ, ಔಡವ ಮತ್ತು ಸ್ವರಾಂತರವೆಂಬ ಪ್ರಕಾರಗಳು.

ಸಂಪೂರ್ಣವೆಂದರೆ ಆರೋಹಣ, ಅವರೋಹಣಗಳಲ್ಲಿ ಏಳು ಸ್ವರಗಳು ಪ್ರಯೋಗದಲ್ಲಿರುವುದು.

### ಭಾಷಾಂಗ ರಾಗ :

ಕೆಲವು ಜನ್ಯರಾಗಗಳು ತನ್ನ ಜನಕರಾಗದ ಸ್ವರಗಳ ಜೊತೆಗೆ ಇತರ ಜನಕರಾಗದ ಒಂದು, ಎರಡು ಅಥವಾ ಮೂರು ಸ್ವರಗಳನ್ನು ತನ್ನ ಭಾವಪೂರ್ಣತೆಗಾಗಿ ತೆಗೆದುಕೊಳ್ಳುತ್ತವೆ. ಅಂತಹ ರಾಗವನ್ನು ಭಾಷಾಂಗ ರಾಗವೆಂದು ಕರೆಯಲಾಗಿದೆ. ಈ ಅನ್ಯಸ್ವರಗಳು ಕೆಲವು ವಿಶೇಷ ಸಂಚಾರಗಳಲ್ಲಿ ಬರುತ್ತದೆ. ಉದಾ: ಭೈರವಿ, ಮುಖಾರಿ, ಯದುಕುಲಕಾಂಬೋಜಿ.

### ವಕ್ರರಾಗ :

ಕೆಲವು ಜನ್ಯರಾಗಗಳ ಆರೋಹಣ ಅಥವಾ ಅವರೋಹಣ ಅಥವಾ ಎರಡರಲ್ಲೂ ಸ್ವರಗಳು ಕ್ರಮವಾಗಿ ಬರುವುದಿಲ್ಲ. ಅಂತಹ ರಾಗಗಳು **ವಕ್ರ ರಾಗ**ಗಳೆನಿಸಿವೆ. ಇಂತಹ ರಾಗಗಳಲ್ಲಿ ಒಂದು ಸ್ವರವು ಎರಡು ಅಥವಾ ಮೂರು ಸಲ ಪ್ರಯೋಗದಲ್ಲಿ ಬರುತ್ತದೆ. ಆದರೆ ಕದನ ಕುತೂಹಲ ರಾಗದಲ್ಲಿ ಒಂದು ಸ್ವರವು ಎರಡು ಸಲ ಪ್ರಯೋಗಕ್ಕೆ ಬರದೇ ಆರೋಹಣವು ಕ್ರಮರಹಿತವಾಗಿದೆ.

ಆ : ಸ ರಿ ಮ ದ ನಿ ಗ ಪ ಸ<br>
ಅ : ಸ ನಿ ದ ಪ ಮ ಗ ರಿ ಸ.

ವಕ್ರರಾಗಗಳು ವರ್ಜ್ಯವಾಗಿರಬಹುದು ಅಥವಾ ವರ್ಜ್ಯವಿಲ್ಲದಿರಬಹುದು. ವಕ್ರರಾಗಗಳು ಉಪಾಂಗವಿರಬಹುದು, ಭಾಷಾಂಗವೂ ಆಗಿರಬಹುದು. ಷಾಡವವೆಂದರೆ, ಆರೋಹಣ, ಅವರೋಹಣಗಳಲ್ಲಿ ಆರು ಸ್ವರಗಳು ಪ್ರಯೋಗದಲ್ಲಿರುವುದು.

ಔಡವವೆಂದರೆ ಆರೋಹಣ, ಅವರೋಹಣಗಳಲ್ಲಿ ಐದು ಸ್ವರಗಳು ಪ್ರಯೋಗದಲ್ಲಿರುವುದು.

ಸ್ವರಾಂತರವೆಂದರೆ ಆರೋಹಣ, ಅವರೋಹಣಗಳಲ್ಲಿ ನಾಲ್ಕು ಸ್ವರಗಳು ಪ್ರಯೋಗದಲ್ಲಿರುವುದು.

ಜನ್ಯರಾಗದ ವರ್ಗೀಕರಣವನ್ನು ತಿಳಿಸುವಾಗ ಆರೋಹಣ ಮತ್ತು ಅವರೋಹಣಗಳನ್ನು ಬೇರೆ ಬೇರೆಯಾಗಿ ಗಣನೆಗೆ ತೆಗೆದುಕೊಳ್ಳಬೇಕು. ಒಂದು ರಾಗದ ಆರೋಹಣ ಅವರೋಹಣಗಳಲ್ಲಿ ಒಂದು ಸ್ವರವು ಎರಡು ಸಲ ಪ್ರಯೋಗದಲ್ಲಿ ಬಂದಿದ್ದರೆ ಅದನ್ನು ಒಂದು ಸ್ವರವೆಂದೇ ಪರಿಗಣಿಸಬೇಕು.

### ಎಂಟು ವಿಧವಾದ ವರ್ಜ್ಯರಾಗಗಳು

1. ಷಾಡವ - ಸಂಪೂರ್ಣ — ಆ : ಸ ರಿ ಗ ಮ ಪ ದ ಸ
   ಉದಾ:- ಭೂಷಾವಳಿ — ಅ : ಸ ನಿ$_2$ ದ$_2$ ಪ ಮ$_2$ ಗ$_3$ ರಿ$_2$ ಸ.
2. ಔಡವ - ಸಂಪೂರ್ಣ — ಆ : ಸ ಗ ಮ ದ ನಿ ಸ
   ಉದಾ:- ಕಲ್ಯಾಣವಸಂತ — ಅ : ಸ ನಿ$_3$ ದ$_1$ ಪ ಮ$_1$ ಗ$_2$ ರಿ$_2$ ಸ.
3. ಸಂಪೂರ್ಣ - ಷಾಡವ — ಆ : ಸ ರಿ$_2$ ಗ$_2$ ಮ$_2$ ಪ ದ$_3$ ನಿ$_3$ ಸ
   ಉದಾ:- ಕೈಕವಶಿ — ಅ : ಸ ನಿ ಪ ಮ ಗ ರಿ ಸ
4. ಸಂಪೂರ್ಣ - ಔಡವ — ಆ : ಸ ರಿ$_2$ ಗ$_2$ ಮ$_1$ ಪ ದ$_1$ ನಿ$_3$ ಸ
   ಉದಾ:- ಕಿರಣಾವಳಿ — ಅ : ಸ ಪ ಮ ಗ ರಿ ಸ
5. ಷಾಡವ - ಷಾಡವ — ಆ : ಸ ರಿ$_2$ ಗ$_2$ ಮ$_1$ ಪ ನಿ$_2$ ಸ
   ಉದಾ:- ಕನ್ನಡಗೌಳ — ಅ : ಸ ನಿ ದ$_2$ ಪ ಮ ಗ ಸ
6. ಷಾಡವ - ಔಡವ — ಆ : ಸ ರಿ$_2$ ಮ$_1$ ಪ ದ$_2$ ನಿ$_2$ ಸ
   ಉದಾ:- ರಸಾವಳಿ (ರಸಾಳಿ) — ಅ : ಸ ದ ಪ ಮ ರಿ ಸ
7. ಔಡವ - ಷಾಡವ — ಆ : ಸ ರಿ ಗ ಪ ದ ಸ
   ಉದಾ:- ಭೌಳಿ — ಅ : ಸ ನಿ$_3$ ದ$_1$ ಪ ಗ$_3$ ರಿ$_1$ ಸ
8. ಔಡವ - ಔಡವ — ಆ : ಸ ರಿ$_1$ ಗ$_3$ ಪ ದ$_1$ ಸ
   ಉದಾ:- ಭೂಪಾಳ — ಅ : ಸ ದ ಪ ಗ ರಿ ಸ.

ಜನ್ಯರಾಗಗಳನ್ನು **ಉಪಾಂಗ** ಮತ್ತು **ಭಾಷಾಂಗ** ರಾಗಗಳೆಂದು ವಿಭಜಿಸಲಾಗಿದೆ. ಇವುಗಳನ್ನು **ವಕ್ರ** ಮತ್ತು **ವಕ್ರವಿಲ್ಲದ** ರಾಗಗಳಾಗಿ ವಿಂಗಡಿಸಲಾಗಿದೆ.

### ಉಪಾಂಗರಾಗ :

ಜನಕ ರಾಗಗಳ ಸ್ವರಗಳನ್ನು ಮಾತ್ರ ತೆಗೆದುಕೊಳ್ಳುವ ಜನ್ಯರಾಗಗಳಿಗೆ ಉಪಾಂಗ ರಾಗವೆನ್ನುತ್ತಾರೆ.

ಉದಾ:- ಮೋಹನ, ಹಂಸಧ್ವನಿ ಮೊದಲಾದವು.

### ವಕ್ರ ಉಪಾಂಗ :

ಜನರಂಜನಿ, ಮಾಳವಿ ಮುಂತಾದವು.

### ವಕ್ರ ಭಾಷಾಂಗ :

ಆನಂದ ಭೈರವಿ, ಕಾಪಿ ಮುಂತಾದವು.



# ಅಧ್ಯಾಯ - 5

## ಸಂಗೀತ ಲಿಪಿ

ಭಾರತೀಯ ಸಂಗೀತದಲ್ಲಿ ಸಂಗೀತ ರಚನೆಗಳ ಪಾತ್ರವು ಹಿರಿದಾದುದು. ಅದರಲ್ಲೂ ಕರ್ನಾಟಕ ಸಂಗೀತದಲ್ಲಿ ಗಾಯನ ಮಾತ್ರವಲ್ಲದೆ ವಾದ್ಯಸಂಗೀತವೂ ಸಂಗೀತ ರಚನೆಗಳನ್ನೇ ಆಧರಿಸಿರುತ್ತದೆ. ವಾಗ್ಗೇಯಕಾರನ ರಚನಾ ವೈಶಿಷ್ಟ್ಯವನ್ನು ಉಳಿಸಿ ಪ್ರಚುರಗೊಳಿಸಲು ಸಂಗೀತ ಲಿಪಿಯು ಬಹಳ ಮುಖ್ಯ. ಸಂಗೀತ ರಚನೆಗಳನ್ನು ಸ್ವರಪಡಿಸಿ ಬರೆಯುವ ಕ್ರಮಕ್ಕೆ **ಸಂಗೀತ ಲಿಪಿ** ಎನ್ನುತ್ತಾರೆ. ಸಂಗೀತ ರಚನೆಗಳನ್ನು ನೆನಪಿನಲ್ಲಿಡಲು ಸಂಗೀತ ಲಿಪಿಯು ಸಹಾಯಕವಾಗುತ್ತದೆ. ಸಂಕೇತಗಳನ್ನು ಬಳಸಿಕೊಂಡು ಸಂಗೀತ ರಚನೆಗಳನ್ನು ಯಾವ ಭಾಷೆಯಲ್ಲಾದರೂ ಬರೆದಿಡಬಹುದಾಗಿದೆ. ಚತುರ ವಿದ್ಯಾರ್ಥಿಗೆ ಈ ಲಿಪಿಯ ಮೂಲಕ ಅಪಾರವಾದ ಸಂಗೀತ ರಚನೆಗಳನ್ನು ಅಭ್ಯಾಸ ಮಾಡಲು ಅವಕಾಶವಾಗುತ್ತದೆ.

ಕರ್ನಾಟಕ ಸಂಗೀತದಲ್ಲಿ ಸಂಗೀತ ರಚನೆಗಳನ್ನು ಸ್ವರಪಡಿಸಿ ಬರೆಯಲು ಕೆಳಕಂಡ ಕ್ರಮವನ್ನು ಅನುಸರಿಸಲಾಗಿದೆ. ರಚನೆಯ ರಾಗ ಮತ್ತು ತಾಳಗಳನ್ನು ಮೇಲ್ಭಾಗದಲ್ಲಿ ತಿಳಿಸಬೇಕು. ರಚನೆಯ ಕಾಲವನ್ನು (ಮಧ್ಯಮ, ವಿಳಂಬ) ಬಲಗಡೆಯ ಮೇಲ್ಭಾಗದಲ್ಲಿ ಸೂಚಿಸಬೇಕು. ರಾಗದ ಆರೋಹಣ ಅವರೋಹಣ ಮತ್ತು ವಾಗ್ಗೇಯಕಾರರ ಹೆಸರನ್ನು ಎಡಗಡೆಯ ಮೇಲ್ಭಾಗದಲ್ಲಿ ತೋರಿಸಬೇಕು. ರಾಗವು ಜನಕವಾಗಿದ್ದರೆ ಮೇಳ ಸಂಖ್ಯೆಯನ್ನೂ, ಜನ್ಯವಾಗಿದ್ದರೆ ಜನಕ ರಾಗದ ಹೆಸರು ಮತ್ತು ಸಂಖ್ಯೆಯನ್ನೂ ತಿಳಿಸಬೇಕು. ಆಯಾ ರಾಗಕ್ಕೆ ಬರುವ ಸ್ವರಗಳನ್ನು ತೋರಿಸಬೇಕು. ಅವುಗಳ ಸ್ಥಾನವನ್ನು ಸ್ವರಗಳ ಪಕ್ಕದಲ್ಲಿ ಕೆಳಗಡೆಗೆ ಸಂಖ್ಯೆಯನ್ನು ಹಾಕುವುದರಿಂದಲೂ ಅಥವಾ ಸ್ವರಗಳ ಹೆಸರುಗಳ ಮೂಲಕವೂ ತಿಳಿಸಬಹುದು.

ಸಾಹಿತ್ಯವನ್ನುಳ್ಳ ರಚನೆಗಳಲ್ಲಿ ಸಾಹಿತ್ಯವನ್ನು ಸೂಚಿಸಬೇಕು. ಈ ವಿಷಯಗಳನ್ನು ತಿಳಿಸಿದ ನಂತರ ಸಂಗೀತ ರಚನೆಗಳನ್ನು ಸ್ವರಕ್ಕೆ ಅಳವಡಿಸಿ ಬರೆಯಬೇಕು.

ಸಪ್ತಸ್ವರಗಳ ಸಂಕೇತಗಳಾದ ಸ, ರಿ, ಗ, ಮ, ಪ, ದ, ನಿ ಗಳನ್ನು ಸ್ವರಗಳನ್ನು ಬರೆಯಲು ಉಪಯೋಗಿಸಲಾಗುತ್ತದೆ. ಸ್ವರಗಳ ಕಾಲಪ್ರಮಾಣವನ್ನು ಕೆಳಗೆ ಕೊಟ್ಟಿರುವಂತೆ ತೋರಿಸಲಾಗುತ್ತದೆ.

ಸ - 1 ಅಕ್ಷರಕಾಲ ಹ್ರಸ್ವಾಕ್ಷರ

ಸಾ - 2 ಅಕ್ಷರಕಾಲ ದೀರ್ಘಾಕ್ಷರ

ಸಾ, - 3 ಅಕ್ಷರಕಾಲ, ದೀರ್ಘಾಕ್ಷರದ ಮುಂದೆ ಅಲ್ಪ ವಿರಾಮ ಚಿಹ್ನೆ

ಸಾ; - 4 ಅಕ್ಷರಕಾಲ, ದೀರ್ಘಾಕ್ಷರದ ಮುಂದೆ ಅರ್ಧವಿರಾಮ ಚಿಹ್ನೆ

ಸಾ;, - 5 ಅಕ್ಷರಕಾಲ, ದೀರ್ಘಾಕ್ಷರದ ಮುಂದೆ ಅರ್ಧವಿರಾಮ ಮತ್ತು ಅಲ್ಪ ವಿರಾಮ ಚಿಹ್ನೆ

ಸಾ;; - 6 ಅಕ್ಷರಕಾಲ, ದೀರ್ಘಾಕ್ಷರದ ಮುಂದೆ ಎರಡು ಅರ್ಧವಿರಾಮ ಚಿಹ್ನೆ

ಸ್ವರಗಳ ಎರಡನೇ ಮೂರನೇ ಕಾಲವನ್ನು ಸ್ವರಗಳ ಮೇಲೆ ಅಥವಾ ಕೆಳಗೆ ಗೆರೆಗಳನ್ನು ಎಳೆಯುವುದರ ಮೂಲಕ ತಿಳಿಸಲಾಗುತ್ತದೆ. (ಕೆಲವರು ಮೇಲೂ ಎಳೆಯುತ್ತಾರೆ).

**ಉದಾ :-** ಮೊದಲನೆಯ ಕಾಲ - ಸ ರಿ ಗ ಮ ಪ ದ ನಿ ಸ̇

ಎರಡನೆಯ ಕಾಲ - <u>ಸ ರಿ ಗ ಮ ಪ ದ ನಿ ಸ̇</u>

ಮೂರನೆಯ ಕಾಲ - <u>ಸ ರಿ ಗ ಮ ಪ ದ ನಿ ಸ̇</u> (two lines)

ನಾಲ್ಕನೆಯ ಕಾಲ - <u>ಸ ರಿ ಗ ಮ ಪ ದ ನಿ ಸ̇</u> (three lines)

ಸ್ವರಗಳ ಸ್ಥಾಯಿಯನ್ನು ಬಿಂದುಗಳ ಮೂಲಕ ಸೂಚಿಸಲಾಗುತ್ತದೆ. ಸ್ವರಗಳ ಮೇಲೆ ಚುಕ್ಕೆ ಇಡುವುದರ ಮೂಲಕ ತಾರಸ್ಥಾಯಿಯನ್ನೂ,ಸ್ವರಗಳ ಕೆಳಗೆ ಚುಕ್ಕೆ ಇಡುವುದರ ಮೂಲಕ ಮಂದ್ರಸ್ಥಾಯಿಯನ್ನೂ ತಿಳಿಸಲಾಗುತ್ತದೆ.

ತಾಳದ ಅಂಗಗಳಾದ ಲಘು, ದ್ರುತ, ಅನುದ್ರುತವನ್ನು ತೋರಿಸಲು ಕ್ರಮವಾಗಿ I, O, U ಈ ಸಂಕೇತಗಳನ್ನು ಉಪಯೋಗಿಸಲಾಗುತ್ತದೆ. ಲಘು ಜಾತಿಯನ್ನು ಸೂಚಿಸಲು ಚಿನ್ಹೆಯ ಪಕ್ಕದಲ್ಲಿ ಸಂಖ್ಯೆಯನ್ನು ಹಾಕಲಾಗುತ್ತದೆ.

ಉದಾ:- ತಿಶ್ರಜಾತಿ - $I_3$

ಚತುರಶ್ರಜಾತಿ - $I_4$

ಖಂಡಜಾತಿ - $I_5$

ಮಿಶ್ರಜಾತಿ - $I_7$

ಸಂಕೀರ್ಣಜಾತಿ - $I_9$

ತಾಳದ ಅಂಗಗಳು (ಲಘು, ದ್ರುತ, ಅನುದ್ರುತ) ಮುಗಿದಾಗ I ಈ ಗುರುತನ್ನೂ, ಆವರ್ತವು ಮುಗಿದಾಗ II ಈ ಗುರುತನ್ನೂ ಹಾಕಲಾಗುತ್ತದೆ.

ಭಾಷಾಂಗ ರಾಗದಲ್ಲಿ ಅನ್ಯಸ್ವರವನ್ನು ಅನ್ಯಸ್ವರಗಳ ಮೇಲೆ ☆ ಈ ಗುರುತನ್ನು ಹಾಕುವುದರ ಮೂಲಕ ತೋರಿಸಲಾಗುತ್ತದೆ.

ರಚನೆಗಳ ಭಾಗಗಳನ್ನು ಅಂದರೆ ಪಲ್ಲವಿ, ಅನುಪಲ್ಲವಿ, ಚರಣ, ಚಿಟ್ಟೆಸ್ವರಗಳನ್ನು, ರಚನೆಯನ್ನು ಸ್ವರಪಡಿಸುವ ಮುನ್ನ ಎಡಭಾಗದಲ್ಲಿ, ಭಾಗದ ಹೆಸರನ್ನು ಸೂಚಿಸಬೇಕು.

ಕೃತಿಯ ಚರಣದ ಉತ್ತರಾರ್ಧವು ಅನುಪಲ್ಲವಿಯ ಧಾತುವಿನ ಪುನರಾವರ್ತನೆಯಾದರೆ ಆ ಭಾಗದ ಸಾಹಿತ್ಯವನ್ನು ಮಾತ್ರ ಬರೆದು ಅನುಪಲ್ಲವಿಯಂತೆ ಎಂಬುದಾಗಿ ತಿಳಿಸಲಾಗುತ್ತದೆ. ಸಂಗತಿಗಳಿಗೆ ಸಂಖ್ಯೆಯನ್ನು ಕೊಡಲಾಗುತ್ತದೆ. ಸಂಗತಿಗಳಲ್ಲಿ ಮೊದಲನೆಯ ಸಂಗತಿಯ ಭಾಗದ ಧಾತುವು ಎರಡನೆ ಮತ್ತು ಮುಂದೆ ಬರುವ ಸಂಗತಿಗಳಲ್ಲಿ ಪುನರಾವರ್ತನೆಯಾದರೆ ಸಾಹಿತ್ಯವನ್ನು ಮಾತ್ರ ಬರೆಯಲಾಗುತ್ತದೆ. ಸಾಹಿತ್ಯಾಕ್ಷರಗಳನ್ನು ಆಯಾ ಸ್ವರದ ಕೆಳಗೆ ಸೂಚಿಸಿ, **ಅ** ಕಾರ, **ಇ** ಕಾರಗಳನ್ನು ಸಾಹಿತ್ಯಾಕ್ಷರದ ಮುಂದೆ ಇಡುವ ಚುಕ್ಕಿಗಳ ಮೂಲಕ ಅಥವಾ ` - ' ಈ ಸಂಕೇತದ ಮೂಲಕ ತಿಳಿಸಲಾಗುತ್ತದೆ. ಉದಾಹರಣೆಗೆ ಒಂದು ಕೃತಿಯ ಅನುಪಲ್ಲವಿಯನ್ನು ಕೊಡಲಾಗಿದೆ.

ವಾಗ್ಗೇಯಕಾರರು : ಮುತ್ತಯ್ಯ ಭಾಗವತರು. ಮಧ್ಯಮ ಕಾಲ ಕೃತಿ.

ರಾಗ - ಕಾಂಭೋಜಿ ತಾಳ : ಮಿಶ್ರಛಾಪು

ಆ : ಸ ರಿ ಗ ಮ ಪ ದ ಸ

ಅ : ಸ ನಿ ದ ಪ ಮ ಗ ರಿ ಸ - ಜನ್ಯರಾಗ 28ನೇ ಮೇಳ ಹರಿಕಾಂಬೋಜಿಯಲ್ಲಿ ಜನ್ಯ.

ಈ ರಾಗಕ್ಕೆ ಬರುವ ಸ್ವರಗಳು :

ಷಡ್ಜ, ಚ : ರಿ; ಅಂ: ಗಾ; ಶು: ಮ; ಪಂ; ಚ: ದೈ; ಮತ್ತು ಕೈ: ನಿ; ಮತ್ತು ಕಾ: ನಿ.

**ಪಲ್ಲವಿ** ॥ ರತ್ನ ಕಂಚುಕ ಧಾರಿಣಿ ಅಂಬ ರತ್ನ ಸಾನು ನಿವಾಸಿನಿ ಅಂಬ ॥

**ಅನುಪಲ್ಲವಿ** ॥ ರತ್ನ ತಾಟಂಕ ಭೂಷಣಿ ಯತ್ನ ಕಾರ್ಯವ ಕೈಗೂಡಿಸು ॥

1. ॥ ಸನಿಪಾದಾ ॥ ಸಾ | ರೀ ॥ ರಿಗಾಮಗರಿ ॥ ಸಾ, ನಿ | ನಿದಪಾ ॥
॥ ರ . . ತ್ನ ॥ ತಾ . ॥ ಟಂಖ . . ॥ ಭೂ . ಷ .ಣೆ ॥

2. ॥ ಸಾರಿಸನಿಪದಾ ॥ ಸರಿಗರಿ | ಸರಿ ॥
॥ ರ . . . . ತ್ನ ॥ತಾ. .. . . ॥ ಟಂಖ ಭೂಷಣೆ

3. ॥ ಸಾರಿಸನಿಪದಾ ॥ ಸರಿಗಮ ಗರಿಸರಿ ॥ ರಿ ಗಾ ಮಗರಿ ।
॥ ರ ತ್ನ ॥ ತಾ. . . . . . . ॥ ಟಂ ಖ ।

॥ ದ ಸ| ರಿ ಗ ॥ ಮಗ ಗರಿಸಾ ॥ ನಿದಪಮ ಪದಸರಿ ॥ ಗರಿಸನಿದಪ । ಮಗರಿಸ ಸರಿಗಮ॥
ಭೂ. ಷ ಣೆ ॥ ಯ. . . ತ್ನ ॥ ಕಾ. . . ರ್ಯವ. ॥ ಕೈ. ಗೂ.. । ಡಿ.ಸು. ಅಂಬ .॥

4. ॥ ಸಾರಿಸನಿಪದಾ । ಸರಿಗಮ ಗರಿಸರಿ ॥ ರಿಗಾ ಮಗರಿ । ದಸರಿಗ ॥ ಮಗ ಗರಿಸಾ । ನಿದಪಮ ಪ ದ ಸರಿ ॥
॥ ರ . . . .ತ್ನ । ತಾ. . . . . . . ॥ ಟಂ. ಕ . . । ಭೂಷಣೆ ॥ ಯ . . .ತ್ನ । ಕಾ. . . ರ್ಯ. .ವ ॥

॥ ಗಾಮಗರೀ ಗರಿಸಾರಿಸ । ನಿದಪಮ ಪದಸರಿ ॥ ಗರಿ
॥ ಕೈ . . ಗೂ. . . . . । ಡಿ. ಸು. ಅಂಬ . ॥ . . ರತ್ನಕಂಚುಕಧಾರಿಣೆ..



# ಅಧ್ಯಾಯ - 6

## ಗಾಯನದಲ್ಲಿ ಧ್ವನಿ ಸಂಸ್ಕರಣೆ

ಗಾಯನಕ್ಕೆ ಶಾರೀರವೇ ಆಧಾರ. ಈ ಶಾರೀರದಿಂದ ಹೊರಡುವ ಧ್ವನಿಯೇ ಒಬ್ಬ ಗಾಯಕನ ಆಧಾರಸ್ತಂಭ. ಈ ಧ್ವನಿಯನ್ನು ಕೃಷಿ ಮಾಡಿ ಸ್ವಾಧೀನದಲ್ಲಿ ಇಟ್ಟುಕೊಳ್ಳುವುದೇ ಸಂಗೀತಗಾರನ ಕರ್ತವ್ಯ. ಈ ಕ್ರಿಯೆಗೆ ಧ್ವನಿಸಂಸ್ಕರಣವೆಂದು ಕರೆಯುತ್ತಾರೆ. ಇದರಿಂದ ಗಾಯಕನಿಂದ ಹೊರಡುವ ಸಂಗೀತದ ಮಾಧುರ್ಯವು ರಮಣೀಯವಾಗಿಯೂ, ಆಕರ್ಷಕವಾಗಿಯೂ, ಮತ್ತು ಗುಣಯುಕ್ತವಾಗಿಯೂ ಇರುತ್ತದೆ. ಸಂಗೀತವು ಒಂದು ಕಲೆಯಾದ್ದರಿಂದ ಅದಕ್ಕೆ ಅಭಿವ್ಯಕ್ತಿ ಬೇಕು. ಈ ಅಭಿವ್ಯಕ್ತಿಗೆ ಒಂದು ಮಾಧ್ಯಮ ಬೇಕು. ಈ ಮಾಧ್ಯಮವೇ ಒಬ್ಬ ಗಾಯಕನ ದೈವದತ್ತವಾದ ಶಾರೀರ ಅಥವಾ ಕಂಠ. ಹೀಗೆ ಕಲೆಗೂ, ಅಭಿವ್ಯಕ್ತಿಗೂ ಮತ್ತು ಮಾಧ್ಯಮಕ್ಕೂ ನಿಕಟ ಸಂಬಂಧವನ್ನು ಕಾಣಬಹುದು.

ಮಧುರಕಂಠವು ದೈವದತ್ತವಾದುದು ಎಂದು ತಿಳಿದ ಮೇಲೆ ಅದನ್ನು ಹೊಂದಿರುವ ಗಾಯಕನು ಮೊದಲು ತನ್ನ ಶರೀರದ ಆರೋಗ್ಯವನ್ನು ಚೆನ್ನಾಗಿ ಇಟ್ಟುಕೊಳ್ಳಲು ಮತ್ತು ಶಿಸ್ತಿನಿಂದ ಕೂಡಿದ ಸಾಧನೆಯಿಂದ ಧ್ವನಿ ಸಂಸ್ಕರಿಸಿ ಉತ್ತಮ ಮಟ್ಟದಲ್ಲಿ ಇಟ್ಟುಕೊಳ್ಳಲು ಸತತವಾಗಿ ಪ್ರಯತ್ನಿಸಬೇಕು. ಆಗಲೇ ಆ ಶಾರೀರವು ನಿಜವಾದ ಸಾರವುಳ್ಳ ಮತ್ತು ಶಕ್ತಿಯುತವಾದ ಮಾಧ್ಯಮವಾಗಿ ಒಬ್ಬ ಗಾಯಕನ ಸಂಗೀತ ಸುಧೆಯ ಪೂರ್ಣ ಅಭಿವ್ಯಕ್ತಿಗೆ ಸಹಾಯಕವಾಗುತ್ತದೆ. ಆದ್ದರಿಂದ ಗಾಯನವನ್ನು ಪ್ರಾಚೀನ ಗ್ರಂಥಗಳು ಉತ್ತಮ, ಮಧ್ಯಮ ಮತ್ತು ಅಧಮವೆಂದು ವಿಂಗಡಿಸಿದ್ದಾರೆ. ಇದಲ್ಲದೆ ಶಾರೀರದ ಗುಣಮಟ್ಟ ಸದಾಕಾಲ ಸುಸ್ಥಿತಿಯಲ್ಲಿ ಇಟ್ಟುಕೊಳ್ಳಲು ಬೇಕಾದ ವೈದ್ಯಕೀಯ ಸಲಹೆ ಮತ್ತು ಔಷಧಿಗಳ ಬಗ್ಗೆ ಗಾಯಕನು ಮತ್ತು ಸಂಗೀತಾಭ್ಯಾಸಿಗಳು ಸಾಕಷ್ಟು ವಿವರಗಳನ್ನು ತಿಳಿದುಕೊಳ್ಳುವುದು ಅತ್ಯಗತ್ಯ.

### ನಾದೋತ್ಪತ್ತಿ :

ಮೇಲೆ ಹೇಳಿರುವ ಹಾಗೆ ನಾದವು ಮನುಷ್ಯನ ಶಾರೀರದಿಂದ ಹೊರಡುವ ಧ್ವನಿ. ಈ ಶಾರೀರವು ಮಾನವನ ಶರೀರದ ಅವಿಭಾಜ್ಯ ಅಂಗ. ಇದಕ್ಕೆ ಕಂಠನಾಳ ಅಥವಾ ಲಾರಿಂಕ್ಸ್ ಎಂದು ಹೆಸರು. ಕಂಠನಾಳದ ಕೆಳಕ್ಕೆ ವಾಯುನಾಳವೂ, ಮೇಲಕ್ಕೆ ಧ್ವನಿವರ್ಧಕ ಪೆಟ್ಟಿಗೆಯೂ ಬರುತ್ತದೆ. ಈ ಪೆಟ್ಟಿಗೆಯಲ್ಲಿ ವಾಣಿ ಬಳ್ಳಿ ಅಥವಾ vocal chord ಇರುತ್ತದೆ. ಈ ವಾಣಿಬಳ್ಳಿಯು ಸುತ್ತಮುತ್ತ ಇರುವ ಮಾಂಸಖಂಡಗಳ ಸಹಾಯದಿಂದ ಬಿಗಿಯಾದಾಗ ಜಾಸ್ತಿ ಶ್ರುತಿಯನ್ನು ಮತ್ತು ಸಡಲಿದಾಗ ಕಡಿಮೆ ಶ್ರುತಿಯನ್ನು ಉಂಟುಮಾಡುತ್ತದೆ. ಇದೇ ಅಧ್ಯಾಯದ ಆರಂಭದಲ್ಲಿ ಪಾರಿಭಾಷಿಕ ಶಬ್ದಗಳಲ್ಲಿ ನಾದದ ಬಗ್ಗೆ ಸ್ಥೂಲ ವಿವರಣೆಯನ್ನು ಗಮನಿಸಬಹುದು. ನಾದವು ಪ್ರಾಣಾಗ್ನಿ ಮತ್ತು ಪ್ರಾಣವಾಯುಗಳ ಸಂಘರ್ಷಣೆಯಿಂದ ಉತ್ಪತ್ತಿಯಾಗುವ ಧ್ವನಿ. ಇದು ಮುಂದಕ್ಕೆ ದೇಹದಲ್ಲಿ ಕ್ರಮವಾಗಿ ನಾಭಿ, ಹೃದಯ, ಕಂಠ, ನಾಲಿಗೆ ಮತ್ತು ಶಿರಸ್ಸುಗಳ ಮೂಲಕ ಪುಷ್ಟಿಗೊಂಡು ಪ್ರಕಟವಾಗುತ್ತದೆ. ಈ ನಾದೋತ್ಪತ್ತಿಯಿಂದ ಸಂಗೀತವು ಉಂಟಾಗುತ್ತದೆ.

ಈ ನಾದೋತ್ಪತ್ತಿಯ ಕ್ರಿಯೆಯನ್ನು ಶಾರ್ಙ್ಗದೇವನು ಸಂಗೀತ ರತ್ನಾಕರದಲ್ಲಿ ಬಹಳ ಸ್ವಾರಸ್ಯವಾಗಿ ವಿವರಿಸಿದ್ದಾನೆ.

ಆತ್ಮನಿಂದ ಬೋಧಿಸಲ್ಪಟ್ಟ ಮನಸ್ಸು ದೇಹದಲ್ಲಿರುವ ಅಗ್ನಿಯನ್ನು ಸ್ಪರ್ಶಿಸುತ್ತದೆ. ಅಗ್ನಿಯಿಂದ ಗಾಳಿಗೆ ಪ್ರೇರೇಪಣೆಯಾಗುತ್ತದೆ. ಆಗ ಬ್ರಹ್ಮಗ್ರಂಥಿಯಲ್ಲಿರುವ ನಾದ ಊರ್ಧ್ವಗಾಮಿಯಾಗಿ ನಾಭಿ-ಹೃದಯ-ಕಂಠ ನಾಲಿಗೆ ಮೂಲಕ ಶಿರಸ್ಸುವರೆಗೂ ನೇರವಾಗಿ ಸಂಚರಿಸಿ, ವದನದ ಮೂಲಕ ಹೊರಬೀಳುತ್ತದೆ.

ಇದನ್ನು ತ್ಯಾಗರಾಜರು ತಮ್ಮ ಜಗನ್ಮೋಹಿನಿ ರಾಗದ ಶೋಭಿಲ್ಲು ಸಪ್ತಸ್ವರ ಕೀರ್ತನೆಯಲ್ಲಿ ಪ್ರತಿಪಾದಿಸಿದ್ದಾರೆ. ನಾದದಿಂದ ಅಕ್ಷರ, ಅಕ್ಷರದಿಂದ ಪದ, ಪದದಿಂದ ಮಾತು, ಮಾತಿನಿಂದ ವ್ಯವಹಾರ, ಹೀಗೆ ಜಗವೇ ನಾದಮಯವಾಗಿದೆ. ದೇಹದ ತ್ರಿದೋಷಗಳಾದ ವಾತ, ಪಿತ್ತ ಮತ್ತು ಕಫ ನಾದೋತ್ಪತ್ತಿಯ ಮೇಲೆ ಸಾಕಷ್ಟು ಪ್ರಭಾವ ಬೀರುತ್ತದೆ.

## ನಾದ ಮತ್ತು ಶಾರೀರ :

ನಾದಕ್ಕೂ ಶಾರೀರಕ್ಕೂ ಇರುವ ನಿಕಟ ಸಂಬಂಧವನ್ನು ಈಗ ಗಮನಿಸೋಣ.

ಮೇಲೆ ಹೇಳಿದ ಕ್ರಿಯಗಳ ಮೂಲಕ ನಾದವು ಉತ್ಪತ್ತಿಯಾದ ಮೇಲೆ, ಅದರ ಗುಣಮಟ್ಟವು ಶಾರೀರವನ್ನು ಅವಲಂಬಿಸಿರುತ್ತದೆ. ಈ ನಾದದ ಗುಣಮಟ್ಟಕ್ಕೆ ಆಂಗ್ಲೇಯರು Timbre ಎಂದು ಕರೆಯುತ್ತಾರೆ. ದೈವದತ್ತವಾಗಿಯೇ ಒಬ್ಬ ಗಾಯಕನಿಗೆ ಒಳ್ಳೆಯ ಶಾರೀರವಿದ್ದರೆ, ಅದರಿಂದ ಹೊರಬರುವ ನಾದದ ಗುಣಮಟ್ಟ ಉನ್ನತಮಟ್ಟದ್ದಾಗಿ, ತ್ರಿಸ್ಥಾಯಿಗಳಲ್ಲೂ ಎಡರು ತೊಡರುಗಳಿಲ್ಲದೆ ಲೀಲಾಜಾಲವಾಗಿ ಹಾಡಲು ಅವಕಾಶವಿರುತ್ತದೆ. ಇಂತಹ ಶಾರೀರಕ್ಕೆ ಹಿತ ಮಿತ ಸಾಧನೆಯಿದ್ದರೆ ಸಾಕು. ಶಾರೀರದಲ್ಲಿ ಹೆಣ್ಣು ಮತ್ತು ಗಂಡು ಶಾರೀರವೆಂದು ಎರಡು ವಿಧ. ಹೆಣ್ಣು ಶಾರೀರ ಗಂಡುಶಾರೀರಕ್ಕಿಂತ 3, 4 ಸ್ವರಗಳ ಹೆಚ್ಚಿನ ಅಂತರದಲ್ಲಿರುತ್ತದೆ. ಗಂಡು ಶಾರೀರಕ್ಕೆ ಗೌಳ ಮತ್ತು ಹೆಣ್ಣು ಶಾರೀರಕ್ಕೆ ಸಂಚು ಶಾರೀರವೆಂದು ಹೆಸರು. ಶಾರೀರದಿಂದ ಹೊರಬರುವ ನಾದವು ಕೆಳಗಿನ ಹಂತ (Lower Register) ಮತ್ತು ಮೇಲಿನ ಹಂತ (Upper Register) ಎಂದು ಎರಡು ವಿಧವಾಗಿ ಪರಿಗಣಿಸಲ್ಪಡುತ್ತದೆ. ಮಧ್ಯಮಸ್ಥಾಯಿಯ ಪಂಚಮದವರೆಗಿನ ಸ್ವರಗಳು ನಾಭಿಯಿಂದ ಕೆಳದವಡೆಯ ಪ್ರಾಂತ್ಯದಲ್ಲಿ ನುಡಿದರೆ, ಮಧ್ಯಸ್ಥಾಯಿಯ ಪಂಚಮದಿಂದ ಆರಂಭವಾಗಿ ಮುಂದೆ ತಾರಸ್ಥಾಯಿಯಲ್ಲಿ ಬರುವ ಸ್ವರಗಳು ಮೇಲುದವಡೆಯಿಂದ ಶಿರಸ್ಸಿನ ಪ್ರಾಂತ್ಯದಲ್ಲಿ ನುಡಿಯುತ್ತದೆ. ಅಲ್ಲದೆ ಸ್ವರಗಳು ತೀವ್ರವಾದಂತೆಲ್ಲಾ ಹೃದಯ ಮತ್ತು ಕಂಠದ ಒತ್ತಡವನ್ನು ಕಡಿಮೆ ಮಾಡಿದರೆ, ತಾರಸ್ಥಾಯಿ ಸ್ವರಗಳು ಮಧುರವಾಗಿ ನುಡಿಯಲು ಅನುಕೂಲವಾಗುತ್ತದೆ. ಹೀಗೆ ಶ್ವಾಸಕೋಶಗಳಿಂದ ಬರುವ ಗಾಳಿಯು ವಾಣಿಬಳ್ಳಿಯ ಮುಖಾಂತರ ಹರಿದು ಬರುವಾಗ ಕಂಪನ ಉಂಟುಮಾಡಿ, ಅದು ಮುಂದೆ ಅಲೆಯಾಗಿ (Waves) ಮಾರ್ಪಟ್ಟು, ಬಾಯಿಯಲ್ಲಿರುವ ಗಾಳಿಯ ಸಹಾಯದಿಂದ ಪುಷ್ಟೀಕರಣಗೊಂಡು ನಾದವಾಗಿ ಹೊರಬರುತ್ತದೆ. ನಾರದರು ಶಾರೀರಕ್ಕೆ ಶಕ್ತಂ, ಪೂರ್ಣಂ, ಅಲಂಕೃತ, ಪ್ರಸನ್ನ, ವಿಕೃಷ್ಟ, ಶ್ಲ ಕ್ಷ್ಣಂ, ಸಮಂ, ಸುಕುಮಾರ ಮತ್ತು ಮಧುರಂ ಎಂಬ ಒಂಭತ್ತು ಲಕ್ಷಣಗಳನ್ನೇ ಹೆಸರಿಸಿದ್ದಾರೆ.

ಒಟ್ಟಿನಲ್ಲಿ ಹೇಳುವುದಾದರೆ, ಒಬ್ಬ ಗಾಯಕನು, ಸ್ವಾಭಾವಿಕವಾಗಿಯೇ ಒಳ್ಳೆ ಶಾರೀರವಿದ್ದರೆ ಅದನ್ನು ಹಿತಮಿತ ಸಾಧನೆಯಿಂದ, ಕಾಪಾಡಿಕೊಳ್ಳುವುದನ್ನು, ಅದಿಲ್ಲದೆ ಮಧ್ಯಮ ಅಥವಾ ಅಧಮ ಶಾರೀರವಿದ್ದರೆ, ಅದನ್ನು ಶಾರೀರ ಲಕ್ಷಣಕ್ಕೆ ಅನುಗುಣವಾಗಿ ಸತತ ಸಾಧನೆಯಿಂದ ಸಂಸ್ಕರಿಸಿ ಹಾಡಲು ಯೋಗ್ಯವಾಗಿ ಮಾಡುವುದನ್ನು ಬಹಳವಾಗಿ ಗಮನಿಸಬೇಕು. ಇದಕ್ಕೆ ಉತ್ತಮ ಸಂಗೀತ ವಿದ್ವಾಂಸರ ಮಾರ್ಗದರ್ಶನವೂ ಅತ್ಯಗತ್ಯ. ಉಛ್ವಾಸ, ನಿಶ್ವಾಸದ ಮೇಲೆ ಒಳ್ಳೆ ನಿಯಂತ್ರಣವನ್ನು ಪ್ರಾಣಾಯಾಮದ ಮೂಲಕ ಪಡೆಯಬೇಕು. ಹೀಗೆ ಮಾಡಿದರೆ ಸ್ವರಾಕ್ಷರ ಉಚ್ಛಾರಣೆಗೆ, ಗಾನ ಮಾಧುರ್ಯಕ್ಕೆ ಅನುಕೂಲವಾಗುತ್ತದೆ. ಈ ಶಾರೀರ ಸಂಸ್ಕರಣವನ್ನು ಬಾಲಪಾಠದಿಂದಲೇ ಆರಂಭಿಸುವುದು ಉಚಿತ. ಶ್ರುತಿ ಸಾಧನೆ, ದೀರ್ಘವಾಗಿ ಸ್ವರಗಳ ಗಾಯನ, ಸರಳೆ ವರಸೆಗಳನ್ನು, ಜಂಟಿವರಸೆಗಳನ್ನು, ಮೂರು ವೇಗದಲ್ಲಿ ಹಾಡುವುದು ಮತ್ತು ಅಕಾರದಲ್ಲಿ ಹಾಡುವುದು ಇತ್ಯಾದಿಗಳನ್ನು ತಪ್ಪದೆ ಮಾಡಬೇಕು.



## ಅಧ್ಯಾಯ - 7

# ವಾದ್ಯಗಳಲ್ಲಿ ನಾದದ ಗುಣಮಟ್ಟ ಮತ್ತು ಸಂಗೀತ ವಾದ್ಯಗಳ ವರ್ಗೀಕರಣ.

ಒಂದೇ ಆಧಾರಶ್ರುತಿಗೆ ಶ್ರುತಿ ಮಾಡಿ ಬೇರೆ ಬೇರೆ ವಾದ್ಯಗಳನ್ನು ನುಡಿಸಿದಾಗ ಪ್ರತಿಯೊಂದು ವಾದ್ಯಕ್ಕೂ ತನ್ನದೇ ಆದ ವೈಶಿಷ್ಟ್ಯತೆ ಇರುವುದು ಕಂಡುಬರುತ್ತದೆ. ಇದನ್ನೇ ಆಯಾವಾದ್ಯದ ನಾದಗುಣವೆನ್ನುತ್ತಾರೆ.

1. **ಆಯಾಯ ವಾದ್ಯಗಳ ತಂತಿಗಳು ಕಂಪಿಸುವ ರೀತಿ ಮತ್ತು ಅನುಸ್ವರಗಳು :** ತಂತೀವಾದ್ಯವಾಗಿದ್ದರೂ ಸಹ ಗೋಟಿನಿಂದ ನುಡಿಸುವ ಗೋಟುವಾದ್ಯದ ನಾದವು ಬೇರೆ. ಬೆರಳುಗಳಿಂದ ನುಡಿಸುವ ವೀಣೆಯ ನಾದವು ಬೇರೆ.

2. **ವಾದ್ಯಗಳಲ್ಲಿ ನಾದದ ಮೂಲ :** ವೀಣೆ ಮತ್ತು ಗೋಟುವಾದ್ಯದಲ್ಲಿ ಲೋಹದ ನಖ ಅಥವಾ ಉಗುರಿನಿಂದ ಮೀಟುವುದಕ್ಕೂ ವ್ಯತ್ಯಾಸವಿದೆ. ಕಮಾನಿನಿಂದ ನುಡಿಸುವುದು (ಪಿಟೀಲಿನಲ್ಲಿ), ಊದುವುದರಿಂದ (ಗಾಳೀವಾದ್ಯದಲ್ಲಿ) ವ್ಯತ್ಯಾಸ ಮೂಡುವುದು ಎಲ್ಲರ ಗಮನಕ್ಕೂ ಬರುವ ಅಂಶವೇ.

3. ವಾದ್ಯಗಳ ಆಕಾರ, ತಯಾರು ಮಾಡುವ ಸಾಮಗ್ರಿಕಾರಕ ಬುರಡೆಯ (ತುಂಬ) ಆಕಾರ, ಉಪಯೋಗಿಸುವ ತಂತಿ, ಅದರ ಉದ್ದ ಮತ್ತು ದಪ್ಪ, ಇದನ್ನೆಲ್ಲಾ ಗಣನೆಗೆ ತಂದುಕೊಳ್ಳಬೇಕು. ಉದಾಹರಣೆಗೆ ತಂಬೂರಿಯ ಕೊಡದ ಗಾತ್ರ ಹೆಚ್ಚಿದ್ದಷ್ಟೂ ತುಂಬುನಾದವಿದ್ದು ನಾದದ ಗಾತ್ರ ಹೆಚ್ಚುತ್ತದೆ. ವೀಣೆಯ ಕೊಡದ ಗಾತ್ರ ಹೆಚ್ಚಿದ್ದಷ್ಟು, ತಗ್ಗು ಶ್ರುತಿ ಮಾಡಿದರೆ ಚೆನ್ನಾಗಿರುತ್ತದೆ. ಅಂತೆಯೇ ತಗ್ಗುಶ್ರುತಿಗೆ ದಪ್ಪ ತಂತಿ ಅಂದರೆ ಸಾರಿಣೆಗೆ 26 ಗೇಜ್, ಪಂಚಮಕ್ಕೆ 23 ಗೇಜ್ ಹೀಗೆ ಹೊಂದಿಸಿದರೆ ಸೂಕ್ತವಾಗಿರುತ್ತದೆ. ವಾದ್ಯದ ಉದ್ದವು ಕಡಿಮೆಯಾದಷ್ಟು ಹೆಚ್ಚು ಶ್ರುತಿ ಬರುತ್ತದೆ.

### ಸಂಗೀತ ವಾದ್ಯಗಳ ವರ್ಗೀಕರಣ :

ಸಂಗೀತಕಲಾ ಪ್ರಪಂಚದಲ್ಲಿ ವಾದ್ಯಗಳ ಪಾತ್ರವು ಅತ್ಯಂತ ಪ್ರಮುಖವಾಗಿದೆ. ವಾದ್ಯಗಳಿಲ್ಲದೇ ಸಂಗೀತವೇ ಇಲ್ಲವೆಂದರೂ ತಪ್ಪಾಗಲಾರದು. ಭಾರತದಲ್ಲಿ ಕಂಡುಬರುವ ವೈವಿಧ್ಯಮಯವಾದ ಜನಪದ ಸಂಗೀತದಲ್ಲಿ, ಹಲವಾರು ವಾದ್ಯಗಳ ಬಳಕೆಯು ಬಹಳ ಹಿಂದಿನಿಂದಲೂ ರೂಢಿಯಲ್ಲಿತ್ತು. ಸುಮಾರು ಐನೂರಕ್ಕೂ ಮೇಲ್ಪಟ್ಟು ಸಂಗೀತ ವಾದ್ಯಗಳು ತಮ್ಮದ್ದೇ ಆದ ಸ್ವರೂಪವನ್ನೂ, ಪ್ರತ್ಯೇಕವಾದ ಹೆಸರುಗಳನ್ನೂ ಹೊಂದಿವೆ. ಇವಲ್ಲದೆ ಈಚೆಗೆ ಪಾಶ್ಚಾತ್ಯ ಸಂಗೀತದ ವಾದ್ಯಗಳೂ ಪರಿಷ್ಕಾರ ಹೊಂದಿ ಭಾರತೀಯ ಸಂಗೀತದ ರಂಗವನ್ನು ಪ್ರವೇಶಿಸಿವೆ. ಸ್ವರಗಳೂ, ಗಮಕಗಳೂ ಸ್ಪಷ್ಟವಾಗಿ ನುಡಿಯುವ ವಾದ್ಯಗಳನ್ನು ಮಾತ್ರ ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೆ ಅಳವಡಿಸಿಕೊಳ್ಳಲಾಗಿದೆ.

ಸಂಗೀತವಾದ್ಯಗಳ ಸಂಖ್ಯೆಯು ಹೆಚ್ಚಿದಂತೆಲ್ಲಾ ಅವುಗಳ ವರ್ಗೀಕರಣವು ಅವಶ್ಯವಾಯಿತು. ಭರತನ ನಾಟ್ಯಶಾಸ್ತ್ರದ ಕಾಲದಲ್ಲೇ ವಾದ್ಯಗಳನ್ನು ತತ, ಸುಷಿರ, ಅವನದ್ಧ, ಘನವೆಂಬುದಾಗಿ ವಿಂಗಡಿಸಿರುವುದು ಕಂಡುಬಂದಿದೆ. ಇಂದಿಗೂ ಈ ವರ್ಗೀಕರಣವು ರೂಢಿಯಲ್ಲಿದೆ. ಸಂಗೀತ ಮಕರಂದದಲ್ಲಿ (ನಾರದ) ಸಂಗೀತ ವಾದ್ಯಗಳನ್ನು ಶಾರೀರಜ, ನಖಜ, ವಾಯುಜ, ಚರ್ಮಜ, ಲೋಹಜವೆಂದು ವಿಂಗಡಿಸಿರುವುದು ಕಂಡುಬಂದಿದೆ.

## ಸಂಗೀತ ವಾದ್ಯಗಳ ವರ್ಗೀಕರಣ



**ತತವಾದ್ಯ :**

ತಂತಿಗಳ ಮೂಲಕ ನಾದೋತ್ಪತ್ತಿಯಾಗುವ ವಾದ್ಯಗಳೇ ತತವಾದ್ಯ. ಅಥವಾ ತಂತೀವಾದ್ಯಗಳು. ತಂತೀ ವಾದ್ಯಗಳನ್ನು ಶ್ರುತಿ ವಾದ್ಯ ಮತ್ತು ಸಂಗೀತವಾದ್ಯಗಳೆಂದು ವಿಂಗಡಿಸಲಾಗಿದೆ. ಗಾಯನ ಅಥವಾ ವಾದನಗಳಲ್ಲಿ ಶ್ರುತಿಗಾಗಿ ಉಪಯೋಗಿಸುವ ವಾದ್ಯಗಳು ಶ್ರುತಿವಾದ್ಯಗಳು.

ಉದಾ: ತಂಬೂರಿ.




ತಂಬೂರಿ.

ಈ ತಂತಿ ವಾದ್ಯಗಳನ್ನು ಮತ್ತೆ **ಕಮಾನಿನಿಂದ ನುಡಿಸುವ ವಾದ್ಯ, ಬೆರಳಿನಿಂದ ಮೀಟುವ ವಾದ್ಯಗಳೆಂದು** ವಿಂಗಡಿಸಲಾಗಿದೆ.

ಉದಾ: ಕಮಾನಿನಿಂದ ನುಡಿಸುವ ವಾದ್ಯಗಳು - ಪಿಟೀಲು, ಸಾರಂಗಿ.
ಮೀಟಿ ನುಡಿಸುವ ವಾದ್ಯಗಳು - ವೀಣೆ, ಗೋಟುವಾದ್ಯ, ಮ್ಯಾಂಡೋಲಿನ್



ಪಿಟೀಲು

ಮೀಟಿ ನುಡಿಸುವ ವಾದ್ಯಗಳು - ವೀಣೆ, ಗೋಟುವಾದ್ಯ, ಮ್ಯಾಂಡೋಲಿನ್



ವೀಣೆ



ಗೋಟು ವಾದ್ಯ ( ಮೆಟ್ಟಿಲುಗಳಿಲ್ಲದ ವಾದ್ಯ):

ಸಾರಿಕೆಗಳುಳ್ಳ (ಮೆಟ್ಟಲುಗಳಿರುವ) ವಾದ್ಯಗಳು.

ಉದಾ: ವೀಣೆ, ಸಿತಾರ್, ಮ್ಯಾಂಡೋಲಿನ್, ಗಿಟಾರ್.


ಮ್ಯಾಂಡೋಲಿನ್


ಸಂತೂರ್


ಗಿಟಾರ್

ಸಾರಿಕೆಗಳಿಲ್ಲದ ವಾದ್ಯಗಳು ಗೋಟುವಾದ್ಯ, ಪಿಟೀಲು, ಸರೋದ್ ಮುಂತಾದವು.

ವೀಣೆಯು ಸ್ಥಿರವಾದ ಸಾರಿಕೆಗಳನ್ನು ಹೊಂದಿದೆ. ಸಿತಾರ್, ಚಲಿಸುವ ಸಾರಿಕೆಗಳಿಂದ ಕೂಡಿದ ವಾದ್ಯ. ಶತತಂತಿವೀಣೆ ಅಥವಾ ಸಂತೂರ್ ವಾದ್ಯದಲ್ಲಿ ಸಾರಿಕೆಗಳಿಲ್ಲದೆ ತಂತಿಗಳನ್ನು ಕಟ್ಟಿ ಅವುಗಳನ್ನು ಕಡ್ಡಿಯಿಂದ ಹೊಡೆಯುವುದರ ಮೂಲಕ ನುಡಿಸಲಾಗುತ್ತದೆ.

## ಸುಷಿರ ವಾದ್ಯಗಳು :

ಗಾಳಿಯ ಮೂಲಕ ನಾದವನ್ನು ಹೊರಡಿಸುವ ವಾದ್ಯಗಳಿಗೆ ಸುಷಿರವಾದ್ಯವೆನ್ನುತ್ತಾರೆ. ಇದನ್ನು ಮರುತ್ ವಾದ್ಯವೆಂದೂ ಕರೆಯಲಾಗಿದೆ. ಉದಾ : ಕೊಳಲು, ನಾಗಸ್ವರ, ಮುಖವೀಣೆ ಮುಂತಾದವು.




ಕೊಳಲು

ನಾಗಸ್ವರ

ಇದು ಮತ್ತೆ ಶ್ರುತಿವಾದ್ಯ ಮತ್ತು ಸಂಗೀತವಾದ್ಯವೆಂದು ಎರಡು ಬಗೆಯಾಗಿದೆ. ಶ್ರುತಿಗಾಗಿ ಉಪಯೋಗಿಸುವ ಒತ್ತು ಶ್ರುತಿವಾದ್ಯವೆನಿಸಿದೆ.

ಶಂಖ ವಾದ್ಯದಲ್ಲಿ ಊದುವುದರ ಮೂಲಕ ಸ್ವರಗಳನ್ನು ನುಡಿಸಲಾಗುತ್ತದೆ. ಹಾಗಾಗಿ ಇದು ಸಂಗೀತವಾದ್ಯ.

ಒತ್ತಿ ನುಡಿಸುವ ಶ್ರುತಿ ಪೆಟ್ಟಿಗೆಯು ಶ್ರುತಿವಾದ್ಯಕ್ಕೆ ಸೇರುತ್ತದೆ. ಒತ್ತಿ ನುಡಿಸುವ ಹಾರ್ಮೋನಿಯಂ ಸಂಗೀತ ವಾದ್ಯವಾಗಿದೆ. ಸುಷಿರ ವಾದ್ಯದಲ್ಲಿ ರಂಧ್ರಗಳನ್ನುಳ್ಳ ವಾದ್ಯಗಳು, ಕೊಳಲು, ನಾಗಸ್ವರ, ಷಹನಾಯ್ ಮುಂತಾದವು. ಕ್ಲಾರಿಯೋನೆಟ್, ಸಾಕ್ಸೋಫೋನ್ ವಾದ್ಯಗಳಲ್ಲಿ ಕೀಗಳನ್ನು ಅಳವಡಿಸಲಾಗಿದೆ.



ಕ್ಲಾರಿಯೊನೆಟ್ ಸಾಕ್ಸೋಫೋನ್

**ಅವನದ್ಧ ವಾದ್ಯಗಳು :**

ಎಳೆದು ಕಟ್ಟಿರುವ ಚರ್ಮವನ್ನು ತಟ್ಟುವುದರ ಮೂಲಕ ನಾದೋತ್ಪತ್ತಿಯಾಗುವ ವಾದ್ಯಗಳೇ ಅವನದ್ಧ, ಅಥವಾ ಆನದ್ಧ ಅಥವಾ ಚರ್ಮ ವಾದ್ಯಗಳು.

ಉದಾ : ಮೃದಂಗ, ಡೋಲು.



ಮೃದಂಗ ಡೋಲು

ಒಂದು ಮುಖವನ್ನು ಹೊಂದಿರುವ ವಾದ್ಯಗಳು ಖಂಜರಿ, ತಮಟೆ ಮುಂತಾದವು.

ಎರಡು ಮುಖಗಳಲ್ಲೂ ನುಡಿಸುವ ವಾದ್ಯ. ಮೃದಂಗ, ಡೋಲು, ಪಖಾವಾಜ್ ಮುಂತಾದವು.

ಪಕ್ಕವಾದ್ಯವೆನಿಸಿರುವ ತಾಳವಾದ್ಯಗಳಲ್ಲಿ ಮೃದಂಗ, ಡೋಲು ಪ್ರಧಾನ ವಾದ್ಯವೆನಿಸಿವೆ.

ಇತರ ವಾದ್ಯಗಳಾದ ಖಂಜರಿ, ಡೋಲಕ್ ಮುಂತಾದವು ಉಪ ಪಕ್ಕವಾದ್ಯವೆನಿಸಿವೆ.

**ಘನ ವಾದ್ಯ :**

ಕಂಚು, ಹಿತ್ತಾಳೆ, ಕಬ್ಬಿಣ ಮುಂತಾದ ಲೋಹದಿಂದ ತಯಾರಿಸಲ್ಪಟ್ಟ ಹಾಗೂ ಮಣ್ಣಿನಿಂದ ತಯಾರಿಸಲ್ಪಟ್ಟ ನಾದವನ್ನು ಹೊರಹೊಮ್ಮಿಸುವ ವಾದ್ಯಗಳನ್ನು ಘನವಾದ್ಯಗಳೆಂದ ಕರೆಯುತ್ತಾರೆ. ಉದಾ : ಘಂಟೆ, ತಾಳ, ತ್ರಿಕೋನ, ಮೋರ್ಚಿಂಗ್, ಘಟ ಮುಂತಾದವು.

**ತಂಬೂರಿ :**

ಪುರಾಣಗಳಲ್ಲಿ ಮಹಾಕಾವ್ಯವಾದ ರಾಮಾಯಣದಲ್ಲಿ ಉಲ್ಲೇಖವಾಗಿರುವ ಈ ಶ್ರುತಿವಾದ್ಯವು ಬಹಳ ಪುರಾತನವಾದುದು. ಪುರಂದರ ದಾಸರಿಂದ **ತಂಬೂರಿ ಮೀಟಿದವ ಭವಾಬ್ಧಿ ದಾಟಿದವ** ಎಂದೂ, ತ್ಯಾಗರಾಜರಿಂದ **ತಂಬೂರ ಚೆಕ್ಕೊನಿ ಗುಣಮುಲ ಚೆಲುವಂದ ಪಾಡುಚು** ಎಂಬುದಾಗಿ ಉಲ್ಲೇಖಗೊಂಡ ತಂಬೂರಿಯು **ತತ** ಅಥವಾ **ತಂತೀ** ವಾದ್ಯಗಳ ಗುಂಪಿಗೆ ಸೇರುತ್ತದೆ.

**ರಚನಾಕ್ರಮ :**

ಹಲಸಿನ ಮರ ಅಥವಾ ಸೋರೆಬುರುಡೆಯಿಂದ ತಂಬೂರಿಯನ್ನು ತಯಾರಿಸಲಾಗುತ್ತದೆ. ಇತ್ತೀಚೆಗೆ ಫೈಬರ್‌ಗ್ಲಾಸ್‌ನಲ್ಲಿ ಕೊಡವನ್ನು ಮಾಡಿ ಉಳಿದ ಭಾಗವನ್ನು ಹಲಸಿನ ಮರದಿಂದ ಮಾಡುತ್ತಿದ್ದಾರೆ. ಈ ವಾದ್ಯವು ಕೊಡ ಮತ್ತು ದಂಡಿಯೆಂಬ ಎರಡು ಪ್ರಮುಖವಾದ ಭಾಗಗಳಿಂದ ಕೂಡಿದೆ. ಸೋರೆ ಬುರುಡೆಯ ಕೊಡವನ್ನುಳ್ಳ ತಂಬೂರಿಗಳಲ್ಲೂ ದಂಡಿ ಮತ್ತು ಎದೆ ಹಲಗೆಗಳು ಹಲಸಿನ ಮರದ್ದಾಗಿರುತ್ತದೆ. ಅರ್ಧಕೊಡದ ಆಕಾರದಲ್ಲಿರುವುದೇ ಕೊಡ. ಇದನ್ನು ತಳ್ಳಗಿರುವ ಹಲಗೆಯಿಂದ ಮುಚ್ಚಲಾಗುತ್ತದೆ. ಇದೇ ಎದೆ ಹಲಗೆ ಎನಿಸಿದೆ. ಮಧ್ಯಭಾಗದಲ್ಲಿ

ಸ್ವಲ್ಪ ಉಬ್ಬಿದಂತಿರುವ ಈ ಎದೆ ಹಲಗೆಯ ಮಧ್ಯಭಾಗದಲ್ಲಿ ಒಂದು ಸಣ್ಣ ರಂಧ್ರವಿದೆ. ಇದೇ ಬ್ರಹ್ಮರಂಧ್ರ. ಬ್ರಹ್ಮರಂಧ್ರಕ್ಕೂ ದಂಡಿಯ ಪ್ರಾರಂಭಕ್ಕೂ ಇರುವ ಅಂತರದ ಮಧ್ಯಭಾಗಕ್ಕೆ ಎಡಬಲಗಳಲ್ಲಿ ಚಕ್ರಾಕಾರದ ರಂಧ್ರಗಳನ್ನು ಮಾಡಲಾಗಿದೆ. ನಾದದ ಕಂಪನಗಳನ್ನು ಹೆಚ್ಚಿಸಲು ಈ ರಂಧ್ರಗಳು ಸಹಾಯ ಮಾಡುತ್ತವೆ. ಬ್ರಹ್ಮರಂಧ್ರದ ಮೇಲ್ಭಾಗದಲ್ಲಿ ಕುದುರೆ (ಬ್ರಿಡ್ಜ್) ಯನ್ನು ಕೂರಿಸಲಾಗಿದೆ. ಇದನ್ನು ಎದೆ ಹಲಗೆಗೆ ಅಂಟಿಸದೆ ಹಿಂದೆ ಮುಂದೆ ಚಲಿಸುವಂತೆ


ತಂಬೂರಿ

ಕೂಡಿಸಿದೆ. ದಂಡಿಯ ಒಳಭಾಗವು ಪೊಳ್ಳಾಗಿದ್ದು ತೆಳುವಾದ ಹಲಗೆಯಿಂದ ಮುಚ್ಚಲಾಗಿರುತ್ತದೆ. ದಂಡಿಯು ಉದ್ದವು ಕೊಡದ ಎರಡರಷ್ಟಿದೆ. ದಂಡಿಯ ತುದಿಯಲ್ಲಿ ಇರುವ ರಂಧ್ರಗಳಿಗೆ ತಂತಿಯನ್ನು ಕಟ್ಟುವ ರಂಧ್ರಗಳಿಂದ ಕೂಡಿದ ನಾಲ್ಕು ಬಿರಡೆಗಳನ್ನು ನೆಡಲಾಗುತ್ತದೆ. ಈ ರಂಧ್ರಗಳು ದಂಡಿಯ ತುದಿಯ ಮೇಲ್ಭಾಗದಲ್ಲಿ ಎರಡು, ಕೆಳಭಾಗದಲ್ಲಿ ಎರಡು; ಅಕ್ಕಪಕ್ಕಗಳಲ್ಲಿ ಎರಡೆರಡು ಇದ್ದು ಒಟ್ಟು ಎಂಟು ಇವೆ. ಬಿರಡೆಗಳನ್ನು ನೆಟ್ಟಿರುವ ಭಾಗದಿಂದ ಸ್ವಲ್ಪ ಕೆಳಗೆ, ದಂಡಿಯ ಮೇಲ್ಭಾಗದಲ್ಲಿ ನಾಲ್ಕು ರಂಧ್ರಗಳಿರುವ ದಂತದ ಪಟ್ಟಿಯನ್ನು ಕೂರಿಸಲಾಗಿದೆ. ಈ ರಂಧ್ರದ ಮೂಲಕ ತಂತಿಯನ್ನು ತೂರಿಸಿ ಬಿರಡೆಗೆ ಕಟ್ಟಲಾಗುತ್ತದೆ. ಈ ಪಟ್ಟಿಯನ್ನು ಹಲ್ಲುಕಡ್ಡಿಯೆಂದೂ, ಕುದುರೆ ಎಂದೂ ಕರೆಯಲಾಗಿದೆ. ಕೊಡದ ಕಂಠವನ್ನೂ ಮತ್ತು ದಂಡಿಯನ್ನು ಸೇರಿಸುವ ಭಾಗವನ್ನು ದಂತದ ಪಟ್ಟಿಯಿಂದ ಭದ್ರಪಡಿಸಲಾಗುತ್ತದೆ. ಮೂರು ಉಕ್ಕಿನ ತಂತಿಗಳನ್ನೂ ಒಂದು ಹಿತ್ತಾಳೆ ತಂತಿಯನ್ನು ಕೊಡದ ತುದಿಯಲ್ಲಿರುವ ನಾಗಪಾಶದ (ಗಡ್ಡ)ಲ್ಲಿರುವ ನಾಲ್ಕು ರಂಧ್ರಗಳಲ್ಲಿ ತೂರಿಸಿ ಕಟ್ಟಲಾಗುತ್ತದೆ. ಈ ತಂತಿಗಳು ಕುದುರೆಯ ಮೇಲೆ ಹಾದು ಹೋಗುತ್ತವೆ. ಶ್ರುತಿಯ ಸೂಕ್ಷ್ಮ ವ್ಯತ್ಯಾಸವನ್ನು ಸರಿಪಡಿಸಲು ನಾಗಪಾಶ ಮತ್ತು ಕುದುರೆಯ ಮಧ್ಯಭಾಗದಲ್ಲಿ ತಂತಿಗಳಿಗೆ ಮಣಿಯನ್ನು ಪೋಣಿಸಲಾಗುತ್ತದೆ. ನಾದವನ್ನು ಹೆಚ್ಚಿಸಲು ಕುದುರೆ ಮತ್ತು ತಂತಿಯ ನಡುವೆ ರೇಷ್ಮೆ ಅಥವಾ ನೂಲಿನ ದಾರವನ್ನು ಕೂರಿಸಲಾಗುತ್ತದೆ. ಇದನ್ನೇ ಜೀವಾಳವೆನ್ನುತ್ತಾರೆ. ಈ ಜೀವಾಳವನ್ನು ಹಿಂದೆ ಮುಂದೆ ಚಲಿಸುವಂತೆ ಮಾಡಿ ಯಾವ ಸ್ಥಳದಲ್ಲಿ ಝೇಂಕಾರ ಬರುತ್ತದೆಯೋ ಅಲ್ಲಿ ನಿಲ್ಲಿಸಲಾಗುತ್ತದೆ.

### ತಂಬೂರಿಯನ್ನು ಶ್ರುತಿ ಮಾಡುವ ವಿಧಾನ :

ತಂಬೂರಿಯ ನಾಲ್ಕು ತಂತಿಗಳನ್ನು ಕ್ರಮವಾಗಿ ಪಂಚಮ, ಸಾರಿಣಿ, ಅನುಸಾರಿಣಿ, ಮಂದ್ರವೆಂದು ಕರೆಯಲಾಗಿದೆ. ಪಂಚಮ, ಸಾರಿಣಿ, ಅನುಸಾರಿಣಿ ತಂತಿಗಳು ಉಕ್ಕಿನದ್ದಾಗಿದ್ದು ಮಂದ್ರವು ಹಿತ್ತಾಳೆಯದಾಗಿರುತ್ತದೆ. ಸಾರಿಣಿ ಅನುಸಾರಿಣಿಗಳನ್ನು ಆಧಾರ ಷಡ್ಜಕ್ಕೆ ಶ್ರುತಿ ಮಾಡಬೇಕು. ಪಂಚಮವನ್ನು ಮಂದ್ರಸ್ಥಾಯಿ ಪಂಚಮಕ್ಕೂ, ಮಂದ್ರವನ್ನು ಮಂದ್ರಸ್ಥಾಯಿ ಷಡ್ಜಕ್ಕೂ ಶ್ರುತಿ ಮಾಡಬೇಕು. ತಂಬೂರಿಯನ್ನು ನೆಟ್ಟಗೆ ನಿಲ್ಲಿಸಿಕೊಂಡು ಮಧ್ಯ ಬೆರಳಿನಿಂದ ಪಂಚಮವನ್ನೂ ತೋರ್ಬೆರಳಿನಿಂದ ಸಾರಿಣಿ, ಅನುಸಾರಿಣಿ ಮತ್ತು ಮಂದ್ರ ತಂತಿಗಳನ್ನೂ ದಂಡಿಯ ಮಧ್ಯಭಾಗದಲ್ಲಿ ಲಯಬದ್ಧವಾಗಿ ಮೀಟಬೇಕು.

**ಪಿಟೀಲು :**

ತತ ಅಥವಾ ತಂತೀ ವಾದ್ಯವೆನಿಸಿರುವ ಪಿಟೀಲು ವಿಶ್ವಪ್ರಸಿದ್ಧವಾಗಿ ಅಂತರ ರಾಷ್ಟ್ರೀಯ ವಾದ್ಯವಾಗಿದೆ. ಪ್ರಧಾನ ಮತ್ತು ಪಕ್ಕವಾದ್ಯವಾಗಿ ವಿಜೃಂಭಿಸುತ್ತಿರುವ ಈ ವಾದ್ಯವನ್ನು ಕಮಾನಿನಿಂದ ನುಡಿಸಲಾಗುತ್ತದೆ. ಪ್ರಾಚೀನಕಾಲದಲ್ಲಿ ಬಳಕೆಯಲ್ಲಿದ್ದ ಧನುರ್ವೀಣೆಯನ್ನು ಪಿಟೀಲು ಹೋಲುತ್ತದೆ. ಪಾಶ್ಚಿಮಾತ್ಯ ಸಂಗೀತ ವಾದ್ಯವಾಗಿದ್ದ ಪಿಟೀಲನ್ನು ಕರ್ನಾಟಕ ಸಂಗೀತಕ್ಕೆ ಅಳವಡಿಸಿದ ಕೀರ್ತಿ ಮುತ್ತುಸ್ವಾಮಿ ದೀಕ್ಷಿತರ ತಮ್ಮಂದಿರಾದ ಬಾಲುಸ್ವಾಮಿ ದೀಕ್ಷಿತರು ಮತ್ತು ಶಿಷ್ಯರಾದ ವಡಿವೇಲುರವರಿಗೆ ಸಲ್ಲುತ್ತದೆ. ಸ್ವಾತಿ ತಿರುನಾಳ್ ಮಹಾರಾಜರಿಂದ ವಡಿವೇಲುರವರು ದಂತದ ಪಿಟೀಲನ್ನು ಬಹುಮಾನವಾಗಿ ಪಡೆದರು. ಇಂದಿಗೂ ತಂಜಾವೂರಿನಲ್ಲಿ ಆ ಪಿಟೀಲನ್ನು ನೋಡಬಹುದು.

ಪಿಟೀಲು ವಾದ್ಯವು ಪೆಟ್ಟಿಗೆ, ಅಂಗುಲಫಲಕ (ಫಿಂಗರ್‌ಬೋರ್ಡ್) ಮತ್ತು ಬಿರಡೆ ಪೆಟ್ಟಿಗೆ (ಪೆಗ್‌ಬಾಕ್ಸ್) ಎಂಬ ಮೂರು ಭಾಗಗಳಿಂದ ಕೂಡಿದೆ. ಆಯಾಕಾರದ ಆಕಾರದಲ್ಲಿರುವ ಪೆಟ್ಟಿಗೆಯ ಭಾಗವು ಪೊಳ್ಳಾಗಿದ್ದು ವಿಶಿಷ್ಟವಾದ ಆಕಾರದಿಂದ ಕೂಡಿದೆ. ಈ ಪೆಟ್ಟಿಗೆಯನ್ನು ಹಗುರವಾದ ಮರಗಳಿಂದ ತಯಾರಿಸಲಾಗಿದ್ದು, ಎದೆ ಹಲಗೆಯು ಪೈನ್ ಮರದಿಂದಲೂ, ಬೆನ್ನುಹಲಗೆಯು ಸೈಕಮೋರ್ ಅಥವಾ ಮೇಪಲ್ ಮರದಿಂದಲೂ ಕೂಡಿರುತ್ತದೆ.



ಪಿಟೀಲು

ಈ ಎರಡು ಭಾಗಗಳನ್ನೂ ಸೀಡಾರ್ ಮರದ ಪಟ್ಟಿಯಿಂದ ಜೋಡಿಸಲಾಗಿದೆ. ಈ ಪಟ್ಟಿಯನ್ನು ಸೀಡಾರ್ ಮರದ ಸಣ್ಣ ಕಡ್ಡಿಯಂತಿರುವ ತುಂಡಿನಿಂದ ಅಳವಡಿಸಲಾಗಿದೆ. ನಾದವನ್ನು ವೃದ್ಧಿಸಲು ಬೆನ್ನು ಹಲಗೆಯ ಮೇಲೆ ಅಡ್ಡವಾಗಿ ಸಣ್ಣ ಸಣ್ಣ ಗೆರೆಗಳುಳ್ಳ ಮರವನ್ನು ಹಾಕಲಾಗುತ್ತದೆ. ಮೇಪಲ್ ಮರದ ಕುದುರೆಯು ರಂಧ್ರಗಳಿಂದ ಕೂಡಿದ್ದು ಹಗುರವಾಗಿರುತ್ತದೆ. ಇದು ಮೂರೂವರೆ ಅಥವಾ ನಾಲ್ಕು ಸೆಂಟಿಮೀಟರಷ್ಟು ಎತ್ತರವನ್ನೂ ಐದು ಸೆಂಟಿಮೀಟರ್ ಅಗಲವನ್ನೂ ಹೊಂದಿ, ಕೆಳಭಾಗವು ಚಪ್ಪಟೆಯಾಗಿದ್ದು ಮೇಲ್ಭಾಗವು ಕಮಾನಿನ ಆಕಾರದಲ್ಲಿರುತ್ತದೆ. ಕುದುರೆಯ ಎಡಬಲಗಳಲ್ಲಿ ನಾದವನ್ನು ಹೆಚ್ಚಿಸಲು **"S"** ಈ ಆಕಾರದ ರಂಧ್ರಗಳು ಇವೆ. ಪೆಟ್ಟಿಗೆಯ ಒಳಗೆ ಬಲ ಭಾಗದಲ್ಲಿ ಕುದುರೆಗೆ ಒಂದು ಮಿಲಿಮೀಟರ್ ಅಂತರದಲ್ಲಿ ಮೇಪಲ್ ಮರದ ಕಡ್ಡಿಯನ್ನು ಎದೆ ಹಲಗೆ ಮತ್ತು ಬೆನ್ನು ಹಲಗೆಯ ನಡುವೆ ನಿಲ್ಲಿಸಲಾಗಿದೆ. ಇದನ್ನೇ ನಾದಸ್ತಂಭ (ಸೌಂಡ್ ಪೋಸ್ಟ್) ವೆನ್ನುತ್ತಾರೆ. ನಾದ ಸ್ತಂಭ ಎದೆ ಹಲಗೆಯಿಂದ ಬೆನ್ನು ಹಲಗೆಗೆ ಪ್ರಸಾರ ಮಾಡಲು ಮತ್ತು ಕುದುರೆಯ ಬಿಗುವನ್ನು ಹತೋಟಿಯಲ್ಲಿಡಲು ಸಹಕರಿಸುತ್ತದೆ. ನಾದಸ್ತಂಭದ ಸ್ಥಾನವು ಬದಲಾದಾಗ ನಾದದಲ್ಲಿ ವ್ಯತ್ಯಾಸವುಂಟಾಗುತ್ತದೆ. ಸುಮಾರು ಹದಿನೆಂಟು ಅಥವಾ ಇಪ್ಪತ್ತು ಸೆಂಟಿಮೀಟರ್ ಉದ್ದ, ಮುಕ್ಕಾಲು ಅಥವಾ ಒಂದೂವರೆ ಸೆಂಟಿಮೀಟರ್ ಅಗಲವುಳ್ಳ ತೆಳುವಾದ ಮರದ ಪಟ್ಟಿಯನ್ನು ಕುದುರೆಯ ಎಡಭಾಗದಲ್ಲಿ ಎದೆಹಲಗೆಯ ಕೆಳಗೆ ಮರ ವಜ್ರದಿಂದ ಅಂಟಿಸಲಾಗಿದೆ. ಇದನ್ನು ಬೇಸ್‌ಬಾರ್ ಎಂದು ಕರೆಯುತ್ತಾರೆ. ನಾದವನ್ನು ಹಿಡಿತದಲ್ಲಿಡಲು ಮತ್ತು ಕುದುರೆಯ ಮೇಲಿನ ಒತ್ತಡವನ್ನು ತಡೆಯಲು ಸಹಾಯ

ಮಾಡುತ್ತದೆ. ವಾದ್ಯದ ಒಂದು ತುದಿಯಲ್ಲಿ ಕುದುರೆಗೆ ನೇರವಾಗಿ ಪೆಟ್ಟಿಗೆಯ ಎದೆ ಹಲಗೆ ಮತ್ತು ಬೆನ್ನು ಹಲಗೆಯನ್ನು ಸೇರಿಸುವ ಪಟ್ಟಿಯಲ್ಲಿ ಒಂದು ರಂಧ್ರವಿದ್ದು ಎರಡೂವರೆ ಸೆಂಟಿಮೀಟರ್ ಇರುವ ಮರದ ಗುಂಡಿಯನ್ನು ಅದಕ್ಕೆ ನೆಡಲಾಗಿದೆ. ಇಬೋನಿ ಮರದಿಂದ ತಯಾರಿಸಿದ ಲಾಂಗೂಲಕಾಂಡ ಅಥವಾ ಟೈಲ್ ಪೀಸನ್ನು ಎರಡು ರಂಧ್ರಗಳ ಮೂಲಕ ಗುಂಡಿಯ ಭಾಗಕ್ಕೆ ತಂತಿ ಅಥವಾ ನರದಿಂದ ಕಟ್ಟಲಾಗುವುದು. ಗುಂಡಿಯ ಭಾಗದಲ್ಲಿ ಲಾಂಗೂಲ ಕಾಂಡವು ಚಿಕ್ಕದಾಗಿಯೂ ಇನ್ನೊಂದು ತುದಿಯಲ್ಲಿ ಅಗಲವಾಗಿಯೂ ಇದ್ದು ತಂತಿಯನ್ನು ಕಟ್ಟಲು ನಾಲ್ಕು ರಂಧ್ರಗಳನ್ನು ಹೊಂದಿದೆ. ಕೆಲವು ವಾದ್ಯಗಳಲ್ಲಿ ಶ್ರುತಿಯ ಸೂಕ್ಷ್ಮ ವ್ಯತ್ಯಾಸವನ್ನು ಸರಿಪಡಿಸಲು ಉಕ್ಕಿನ ಸ್ಕ್ರೂಗಳನ್ನು ಈ ರಂಧ್ರಗಳಿಗೆ ಜೋಡಿಸಲಾಗಿದೆ. ಏಳು ತಂತಿಯ ಪಿಟೀಲಿನಲ್ಲಿ ಏಳು ರಂಧ್ರಗಳೂ ಏಳು ಬಿರಡೆಗಳೂ ಇರುತ್ತವೆ.

ಪೆಟ್ಟಿಗೆಯನ್ನೂ ಬಿರಡೆ ಪೆಟ್ಟಿಗೆಯನ್ನೂ ಸೇರಿಸುವ ಮೇಪಲ್ ಮರದ ಭಾಗವು ದಂಡಿಯಂತಿದ್ದು ಇದನ್ನು ನೆಕ್ ಎಂದೂ ಕರೆಯುತ್ತಾರೆ. ಇದನ್ನು ಎಬೋನಿ ಮರದ ತೆಳ್ಳಗಿರುವ ಹಲಗೆಯಿಂದ ಮುಚ್ಚಲಾಗಿದೆ. ಇದರ ಮೇಲೆ ಸಮತಲವಾದ ಅಂಗುಲಿ ಫಲಕವಿದೆ. ದಂಡಿಯನ್ನೂ, ಬಿರಡೆ ಪೆಟ್ಟಿಗೆಯನ್ನು ಸೇರಿಸುವ ಭಾಗವೇ ಮೇರು.

ಅಂಗುಲಿ ಫಲಕಕ್ಕಿಂತ ಎತ್ತರವಾಗಿರುವ ಮೇರುವಿನ ಮೇಲೆ ತಂತಿಗಳು ಹಾದುಹೋಗುತ್ತವೆ. ಅಂಗುಲಿ ಫಲಕವು ಮೇರುವಿನ ಭಾಗದಲ್ಲಿ ಚಿಕ್ಕದಾಗಿದ್ದು ಕ್ರಮೇಣ ದೊಡ್ಡದಾಗಿರುತ್ತದೆ. ಮೇರುವಿಗೆ ಸೇರಿದಂತಿರುವ ಭಾಗವೇ ಬಿರಡೆ ಪೆಟ್ಟಿಗೆ. ಇದರ ಎರಡು ಪಾರ್ಶ್ವಗಳಲ್ಲೂ ನಾಲ್ಕು ರಂಧ್ರಗಳಿದ್ದು ಪ್ರತಿಯೊಂದು ಭಾಗಗಳಲ್ಲೂ ಎರಡೆರಡು ಬಿರಡೆಗಳಂತೆ ನಾಲ್ಕು ಬಿರಡೆಗಳನ್ನು ನೆಡಲಾಗಿದೆ. ಕುದುರೆಗೂ ಅಂಗುಲಿ ಫಲಕಕ್ಕೂ ನಡುವೆ ಆರು ಸೆಂಟಿಮೀಟರಿನಷ್ಟು ಅಂತರವಿದ್ದು ತಂತಿಗಳ ಮೇಲೆ ಈ ಭಾಗದಲ್ಲಿ ಕಮಾನನ್ನು ಎಳೆಯುವುದರಿಂದ ನಾದೋತ್ಪತ್ತಿಯಾಗುತ್ತದೆ. ತಂತಿಗಳ ಒಂದು ತುದಿಯನ್ನು ಟೈಲ್ ಪೀಸಿಗೂ, ಮತ್ತೊಂದು ತುದಿಯನ್ನು ಬಿರಡೆಗಳಿಗೂ ಕಟ್ಟಲಾಗುತ್ತದೆ. ತಂತಿಗಳು ಕುದುರೆ, ಅಂಗುಲಿ ಫಲಕ ಮತ್ತು ಮೇರುವನ್ನು ಹಾದು ಹೋಗುತ್ತವೆ. ಹಗುರವಾಗಿರುವ ಬಿಲ್ಲಿನಂತೆ ಸ್ವಲ್ಪ ಬಾಗಿರುವ ಕಡ್ಡಿಗೆ ಜವೆಯನ್ನು ಕಟ್ಟಲಾಗಿದೆ. ಕಮಾನನ್ನು ಹಿಡಿದುಕೊಳ್ಳುವ ಸ್ಥಳದಲ್ಲಿ ಮರದ ಮೊಳೆ ಮತ್ತು ಸ್ಕ್ರೂಗಳಿದ್ದು ಜವೆಯನ್ನು (ಕುದುರೆಯ ಬಾಲದ ಕೂದಲು) ಬಿಗಿಮಾಡಲು ಅಥವಾ ಸಡಿಲಮಾಡಲು ಅನುಕೂಲ ಮಾಡುತ್ತದೆ. ನುಡಿಸುವ ಮೊದಲು ಜವೆಗೆ **ರೋಸಿನ್** (ರಾಳ) ಎಂಬ ಪದಾರ್ಥವನ್ನು ಉಜ್ಜಲಾಗುವುದು. ಜರ್ಮನಿ ದೇಶದ ಆಂಟೋನಿಯಸ್ ಸ್ಟ್ರಾಡ್‌ವರೀಸ್ ಪಿಟೀಲು ಅತ್ಯುತ್ತಮವಾದದ್ದು ಎಂದಿದ್ದಾರೆ.

### ಪಿಟೀಲನ್ನು ಶ್ರುತಿಮಾಡುವ ವಿಧಾನ :

ನಾಲ್ಕು ತಂತಿಗಳಲ್ಲಿ ಮೊದಲನೆಯ ಉಕ್ಕಿನ ತಂತಿಯನ್ನು ಮಧ್ಯಸ್ಥಾಯಿ ಪಂಚಮಕ್ಕೂ, ಎರಡನೆಯ ಸುತ್ತಿದ ತಂತಿಯನ್ನು ಮಧ್ಯಸ್ಥಾಯಿ ಷಡ್ಜಕ್ಕೂ, ಮೂರನೆಯ ಸುತ್ತಿದ ತಂತಿಯನ್ನು ಮಂದ್ರಸ್ಥಾಯಿ ಪಂಚಮಕ್ಕೂ, ನಾಲ್ಕನೆಯ ಸುತ್ತಿರುವ ತಂತಿಯನ್ನು ಮಂದ್ರಸ್ಥಾಯಿ ಷಡ್ಜಕ್ಕೂ ಶ್ರುತಿಮಾಡಲಾಗುತ್ತದೆ. ನಾಲ್ಕನೆಯ ತಂತಿಯು ಕೆಲವು ವೇಳೆ ನರದ್ದಾಗಿರುತ್ತದೆ.

### ಕೊಳಲು :

ಶ್ರೀ ಕೃಷ್ಣನ ಕರದಲ್ಲಿ ಶೋಭಿಸುವ ಕೊಳಲು ಪ್ರಾಚೀನ ವಾದ್ಯ. ಸುಷಿರ ಅಥವಾ ಗಾಳಿವಾದ್ಯಗಳ ಗುಂಪಿಗೆ ಸೇರುವ ಸಕಲ ಚರಾಚರವನ್ನು ಆಕರ್ಷಿಸುವ ಈ ವಾದ್ಯವು ಹಿಂದಿನಿಂದಲೂ ಜನಪದ ಸಂಗೀತ ವಾದ್ಯಗಳಲ್ಲಿ ಪ್ರಧಾನವಾಗಿ ಕಂಡುಬಂದಿದೆ. ಈ ವಾದ್ಯವನ್ನು ಹಿಂದೂಸ್ಥಾನಿ ಸಂಗೀತದಲ್ಲಿ **ಬಾನ್ಸುರಿ**ಯೆಂದೂ ಪಾಶ್ಚಾತ್ಯ ಸಂಗೀತದಲ್ಲಿ **ಭೊಯೆಮ್** ಎಂದೂ ಕರೆಯುತ್ತಾರೆ. ಪ್ರಧಾನ ಶಾಸ್ತ್ರೀಯ ಸಂಗೀತ ವಾದ್ಯ ಕೊಳಲು ನೃತ್ಯ ಸಂಗೀತಕ್ಕೆ ಪಕ್ಕ ವಾದ್ಯವಾಗಿದೆ.



ಸುಮಾರು ಹದಿನೇಳು ಸೆಂಟಿಮೀಟರ್ ಉದ್ದ ಎರಡು ಸೆಂಟಿಮೀಟರ್ ವ್ಯಾಸ (ಸುತ್ತಳತೆ) ವುಳ್ಳ ಬಿದಿರಿನ ಕೊಳವೆಯಿಂದ ಈ ವಾದ್ಯವು ಕೂಡಿದೆ. ವಾದ್ಯದ ಉದ್ದ ಮತ್ತು ವ್ಯಾಸಕ್ಕನುಗುಣವಾಗಿ ಶ್ರುತಿಯು ನಿರ್ಧಾರವಾಗುತ್ತದೆ. ಉದ್ದ ಕಡಿಮೆಯಾದ ಕೊಳಲು ಹೆಚ್ಚಿನ ಶ್ರುತಿಯನ್ನೂ, ಉದ್ದವಾದ ಕೊಳಲು ತಗ್ಗು ಶ್ರುತಿಯನ್ನೂ ಹೊಂದಿರುತ್ತದೆ. ಒಂದೇ ಪಾರ್ಶ್ವದಲ್ಲಿ ಊದುವುದಕ್ಕೆ ಒಂದು ರಂಧ್ರವೂ, ನುಡಿಸುವುದಕ್ಕೆ ಎಂಟು ರಂಧ್ರಗಳಿಂದಲೂ ಕೊಳಲು ಕೂಡಿದೆ. ಊದುವ ರಂಧ್ರವನ್ನು **ಮುಖರಂಧ್ರ**ವೆಂದು ಕರೆಯಲಾಗಿದೆ. ಮುಖರಂಧ್ರದ ಸಮೀಪದ ತುದಿಯು ಮುಚ್ಚಲಾಗಿದ್ದು ಮತ್ತೊಂದು ತುದಿಯು ತೆರೆದಿರುತ್ತದೆ. ಮುಖರಂಧ್ರವು ಕೊಳಲಿನ ತುದಿಯಿಂದ ಎರಡು ಸೆಂಟಿಮೀಟರಿನಷ್ಟು ದೂರದಲ್ಲಿರುತ್ತದೆ. ಮುಖರಂಧ್ರಕ್ಕೂ ನುಡಿಸುವ ರಂಧ್ರಗಳಿಗೂ ಐದು ಅಥವಾ ಆರು ಸೆಂಟಿಮೀಟರಿನ (ಕೊಳಲಿನ ಉದ್ದವು ಹೆಚ್ಚಾದಷ್ಟು ಇದು ಹೆಚ್ಚಾಗುತ್ತದೆ.) ಅಂತರವಿರುತ್ತದೆ.

ಕೊನೆಯ ರಂಧ್ರವಾದ ತಾರರಂಧ್ರವು ತಾರಷಡ್ಜವಾಗಿರುತ್ತದೆ. ಮುಖರಂಧ್ರವು ವ್ಯಾಸದಲ್ಲಿ ಹೆಚ್ಚಾಗಿಯೂ, ನುಡಿಸುವ ರಂಧ್ರಗಳು ವ್ಯಾಸದಲ್ಲಿ ಚಿಕ್ಕದಾಗಿಯೂ ಮೊಟ್ಟೆಯಾಕಾರದಲ್ಲಿ (oval) ಇರುತ್ತದೆ. ತುಟಿಯ ಮತ್ತು ಬೆರಳುಗಳ ಚಲನೆಯಿಂದ ಸ್ವರಗಳ ವಿಕೃತಿ ಬೇಧವನ್ನೂ, ಗಮಕವನ್ನೂ ನುಡಿಸಲಾಗುತ್ತದೆ. ಉಸಿರಿನ ಮೂಲಕ ಮಂದ್ರ, ಮಧ್ಯ ಮತ್ತು ತಾರಸ್ಥಾಯಿಗಳನ್ನು ನಿಯಂತ್ರಿಸಲಾಗುತ್ತದೆ.

ಹೆಬ್ಬೆಟ್ಟುಗಳ ಆಧಾರದ ಮೇಲೆ ಕೊಳಲನ್ನು ಬಲಗಡೆಗೆ ಅಡ್ಡಲಾಗಿ ಹಿಡಿದುಕೊಂಡು ಕೆಳತುಟಿಯ ಸಮೀಪದಲ್ಲಿಟ್ಟು ಮುಖರಂಧ್ರದ ಮೂಲಕ ಊದಿ ನುಡಿಸಲಾಗುತ್ತದೆ. ಎಡಗೈಯ ಕಿರುಬೆರಳುಗಳನ್ನುಳಿದು ಬಲಗೈಯ ನಾಲ್ಕು ಬೆರಳುಗಳು ಹಾಗೂ ಎಡಗೈಯ ಮೂರು ಬೆರಳುಗಳಿಂದ ರಂಧ್ರಗಳನ್ನು ತೆರೆದು, ಮುಚ್ಚುವುದರಿಂದ ಆಯಾ ಸ್ವರಗಳನ್ನು ಹೊರಡಿಸಲಾಗುತ್ತದೆ. ಎಡಗೈಯ ಬೆರಳುಗಳು ನೇರವಾಗಿರದೇ ಬಲಗೈ ಕಡೆಗೆ ಸ್ವಲ್ಪ ವಾಲಿಸಬೇಕು. ಈ ವಾದ್ಯವು ಎರಡೂವರೆ ಸ್ಥಾಯಿಯಷ್ಟು ಮಾತ್ರ ವ್ಯಾಪ್ತಿ ಹೊಂದಿರುವುದರಿಂದ ಹೆಚ್ಚಿನ ವ್ಯಾಪ್ತಿಗೆ ಕೊಳಲನ್ನೇ ಬದಲಾಯಿಸಬೇಕಾಗುತ್ತದೆ.

ಬಿದಿರು, ರಕ್ತಚಂದನ, ಗಂಧ ಮತ್ತು ಇಬೋನಿ ಮರಗಳಿಂದ ಕೊಳಲನ್ನು ತಯಾರಿಸಬಹುದು. ಆದರೆ ಬಿದಿರಿನ ಕೊಳಲು ಉತ್ತಮವಾಗಿರುತ್ತದೆ. ಬಿದಿರು ಮತ್ತು ಮರದ ಕೊಳಲುಗಳ ತುದಿಯನ್ನು ದಂತ, ಬೆಳ್ಳಿ ಅಥವಾ ಚಿನ್ನದ ಕಟ್ಟುಗಳಿಂದ ಅಲಂಕಾರ ಮಾಡಲಾಗುತ್ತದೆ. ದಂತ, ಕಂಚು, ಬೆಳ್ಳಿ ಮತ್ತು ಚಿನ್ನದಿಂದಲೂ ಕೊಳಲನ್ನು ತಯಾರಿಸುತ್ತಾರೆ.

## ನಾಗಸ್ವರ :

ಭಾರತೀಯ, ಅದರಲ್ಲೂ ದಕ್ಷಿಣ ಭಾರತದ ಸಾಂಸ್ಕೃತಿಕ ಪರಂಪರೆಯಲ್ಲಿ ನಾದಸ್ವರದ ಪಾತ್ರವು ಪ್ರಮುಖವಾಗಿದೆ. ಉತ್ಸವಗಳಲ್ಲಾಗಲೀ, ಶುಭ ಕಾರ್ಯಗಳಲ್ಲಾಗಲೀ ನಾಗಸ್ವರವಿಲ್ಲದೇ ನಡೆಯುವಂತಿಲ್ಲ. ಸುಷಿರ ವಾದ್ಯದ ಗುಂಪಿಗೆ ಸೇರುವ ನಾಗಸ್ವರವನ್ನು ತಮಿಳು ನಾಡಿನಲ್ಲಿ **ನಾಯನಂ** ಎಂದು ಕರೆಯಲಾಗಿದ್ದು ನಾಗಸ್ವರವೆಂದಾಗಿದೆ. ದೈವಭಕ್ತನಾದ, ಪರಾಕ್ರಮಿಯಾದ, ಸಂಗೀತೋಪಾಸಕನಾದ ನಾಗಾಸುರನೆಂಬ ರಾಕ್ಷಸನನ್ನು ದೇವತೆಗಳ ಕೋರಿಕೆಯ ಮೇರೆಗೆ ಸುಬ್ರಹ್ಮಣ್ಯಸ್ವಾಮಿಯು ಸಂಹರಿಸಿದನಂತೆ. ಆ ಅಸುರನ ಕೋರಿಕೆಯಂತೆ ಆತನು ರಕ್ತಚಂದನ ಮರವಾಗಿ ಹುಟ್ಟಿ ಆ ಮರದಿಂದ ತಯಾರಾಗುವ ವಾದ್ಯವನ್ನು ದೈವಕಾರ್ಯಗಳಿಗೆ ವಿನಿಯೋಗವಾಗಲೆಂದು ದೇವರು ಹರಸಿದನು. ಈ ಕಾರಣದಿಂದ ಈ ವಾದ್ಯವನ್ನು ನಾದಸ್ವರ ಅಥವಾ ನಾಗಸ್ವರವೆಂದು ಕರೆಯಲಾಗಿದ್ದು, ಈಗ ನಾದಸ್ವರವೆಂದೇ ಪ್ರಸಿದ್ಧಿಯಾಗಿದೆ.

ಈ ವಾದ್ಯವು ಮೂರು ಭಾಗಗಳಿಂದ ಕೂಡಿದ್ದು, ಮೇಲ್ಭಾಗವು ಉದ್ದವಾದ ಕೊಳವೆಯನ್ನೂ, ಕೆಳಭಾಗವು ಘಂಟೆಯ ಆಕಾರವನ್ನೂ ಹೋಲುತ್ತದೆ. ಕೊಳವೆಯು ಮೇಲು ತುದಿಯಲ್ಲಿ ಬುಗುಡಿಯ ಆಕಾರದಿಂದ ಕೂಡಿದ್ದು ಅದರ ರಂಧ್ರದಲ್ಲಿ ಊದುವ ಪೀಪಿಯನ್ನು ಕೂರಿಸಲಾಗುತ್ತದೆ.



ನಾಗಸ್ವರ

ಈ ಕೊಳವೆಯ ಭಾಗವು ಐದು ಅಥವಾ ಆರೂವರೆ ಸೆಂಟಿಮೀಟರ್ ವ್ಯಾಸದಿಂದ ಕೂಡಿದ್ದು, ಗಂಟೆಯ ಭಾಗದಲ್ಲಿ ಸ್ವಲ್ಪ ಅಗಲವಾಗಿದ್ದು, ಬುಗುಡಿಯ ಭಾಗದಲ್ಲಿ ಸ್ವಲ್ಪ ಕಿರಿದಾಗಿರುತ್ತದೆ. 30 ಅಥವಾ 32 ಸೆಂಟಿಮೀಟರ್ ಉದ್ದವುಳ್ಳ ವಾದ್ಯದ ಕೊಳವೆಯ ಭಾಗದಲ್ಲಿ ಎಂಟು ರಂಧ್ರಗಳಿದ್ದು ಅವು ಒಂದೇ ರೇಖೆಯಲ್ಲಿರುತ್ತದೆ. ಅಕ್ಕಪಕ್ಕದಲ್ಲಿ ಎರಡೆರಡು ರಂಧ್ರಗಳಿದ್ದು, ವಾದ್ಯದಲ್ಲಿ ಒಟ್ಟು ಹನ್ನೆರಡು ರಂಧ್ರಗಳಿರುತ್ತವೆ. ಇವುಗಳಲ್ಲಿ ಏಳು ರಂಧ್ರಗಳು ಸ್ವರಗಳನ್ನು ನುಡಿಸಲು ಐದು ರಂಧ್ರಗಳು ನಾದವನ್ನು ನಿಯಂತ್ರಿಸಲೂ ನೆರವಾಗುತ್ತವೆ. ನಾಲಿಗೆಯಾಕಾರದಲ್ಲಿರುವ ಪೀಪಿಯನ್ನು ಜೀವಾಳಿಯೆಂದು ಕರೆಯಲಾಗಿದೆ. ಪೀಪಿಯನ್ನು ಕಾವೇರಿ ನದಿಯ ತೀರದಲ್ಲಿ ಬೆಳೆಯುವ ಜೊಂಡಿನಿಂದ ತಯಾರಿಸಲಾಗುತ್ತದೆ. ಅಕ್ಕಿಯ ಗಂಜಿಯಲ್ಲಿ ಬೇಯಿಸಿದ ಜೊಂಡನ್ನು ನೆರಳಲ್ಲಿ ಸ್ವಲ್ಪಕಾಲ ಒಣಗಿಸಿ, ಸುತ್ತಿ ಪೀಪಿಯಾಕಾರಕ್ಕೆ ಕತ್ತರಿಸಲಾಗುತ್ತದೆ. ಇಂತಹ ಪೀಪಿಗಳನ್ನು ದಾರದಲ್ಲಿ ಕಟ್ಟಿ ನಾದಸ್ವರದ ಕಂಠಕ್ಕೆ ಕಟ್ಟಲಾಗಿರುತ್ತದೆ. ಈ ಪೀಪಿಯು ಒದ್ದೆಯಾದಾಗ ಅದನ್ನು ಬಿಡಿಸಿಕೊಳ್ಳಲು ಚೂಪಾದ ದಂತದ ತುದಿಯಿಂದ ಚುಚ್ಚಲಾಗುತ್ತದೆ. ಇದನ್ನೂ ಸಹ ದಾರದಲ್ಲಿ ಕಟ್ಟಿ ಪೀಪಿಗಳೊಡನೆ ಕಂಠದಲ್ಲಿ ಕಟ್ಟಲಾಗುತ್ತದೆ.

ಹೆಬ್ಬೆಟ್ಟುಗಳ ಆಧಾರದ ಮೇಲೆ ರಂಧ್ರಗಳು ಮೇಲುಗಡೆ ಬರುವಂತೆ ವಾದ್ಯವನ್ನು ಹಿಡಿದುಕೊಂಡು, ಕೈ ಬೆರಳುಗಳ ಚಲನೆಯ ಮೂಲಕ ರಂಧ್ರವನ್ನು ತೆರೆದು, ಮುಚ್ಚಿ ನುಡಿಸಲಾಗುತ್ತದೆ. ತ್ರಿಸ್ಥಾಯಿಗಳನ್ನು ಈ ಏಳು ರಂಧ್ರಗಳಲ್ಲೇ ಉಸಿರಿನ ನಿಯಂತ್ರಣದಿಂದ ನುಡಿಸಲಾಗುವುದು. ನಾದಸ್ವರ ವಾದನ ಕ್ರಮವನ್ನು ರೂಪಿಸಿದ ಕೀರ್ತಿ ತ್ರಿಮೂರ್ತಿಗಳಲ್ಲೊಬ್ಬರಾದ ರಾಮಸ್ವಾಮಿ ದೀಕ್ಷಿತರಿಗೆ ಸಲ್ಲುತ್ತದೆ.

### ಮೃದಂಗ :

ಮೃದಂಗವಿಲ್ಲದೇ ಸಂಗೀತ ಕಚೇರಿಯು ಅಪೂರ್ಣ. ಪ್ರಾಚೀನ ವಾದ್ಯವಾದ ಮೃದಂಗವು ಅವನದ್ಧ ವಾದ್ಯಗಳಲ್ಲಿ ಒಂದು. ಸಂಗೀತ ಕಚೇರಿಯಲ್ಲಿ ಗಾಯಕನ ಅಥವಾ ವಾದಕನ ಬಲಭಾಗದಲ್ಲಿ ಕಂಡುಬರುವ ಮೃದಂಗವು ಪ್ರಧಾನ ತಾಳವಾದ್ಯ (ಲಯವಾದ್ಯ).

ಮಣ್ಣಿನಿಂದ ತಯಾರಾಗುತ್ತಿದ್ದ ಈ ವಾದ್ಯವು ಕ್ರಮೇಣ ಮರದಲ್ಲಿ ರೂಪುಗೊಂಡಿತು. ಹೆಚ್ಚಾಗಿ ಹಲಸಿನ ಮರವನ್ನು ಉಪಯೋಗಿಸಿದರೂ, ಚಂದನ, ಸಂಪಿಗೆ ಮತ್ತು ಬೇವಿನ ಮರಗಳಿಂದಲೂ ಈ ವಾದ್ಯವನ್ನು ಮಾಡುತ್ತಾರೆ.

ಪೀಪಾಯಿಯಂತೆ ಇರುವ ಮರದ ಭಾಗವು ಮೃದಂಗದಲ್ಲಿ ಪ್ರಧಾನವಾಗಿದ್ದು, ಇದು ನಲವತ್ತೈದು ಅಥವಾ ಅರವತ್ತು ಸೆಂಟಿಮೀಟರಿನಷ್ಟು ಉದ್ದವಿರುತ್ತದೆ. ಇದನ್ನು ಹೊಳವು ಎಂದು ಕರೆಯಲಾಗಿದೆ. ಹೊಳವಿನ ವ್ಯಾಸವು ಮಧ್ಯದಲ್ಲಿ ಇಪ್ಪತ್ತರಿಂದ ಮೂವತ್ತು ಸೆಂಟಿಮೀಟರಿನಷ್ಟಿದ್ದು, ಎಡವು ಹದಿನೆಂಟರಿಂದ ಹತ್ತೊಂಭತ್ತೂವರೆ ಸೆಂಟಿಮೀಟರಿನಷ್ಟಿದ್ದು ಬಲವು ಹದಿನೈದರಿಂದ ಹದಿನೇಳು ಸೆಂಟಿಮೀಟರಿನಷ್ಟಿರುತ್ತದೆ. ಮೃದಂಗದಲ್ಲಿ ಹೆಚ್ಚು ಶ್ರುತಿ ಮೃದಂಗ ಮತ್ತು ತಗ್ಗು ಶ್ರುತಿ ಮೃದಂಗ ಎಂಬುದಾಗಿ ಎರಡು ವಿಧಗಳಿದ್ದು, ಹೆಚ್ಚು ಶ್ರುತಿ ಮೃದಂಗವು ಚಿಕ್ಕದಾಗಿದ್ದು, ತಗ್ಗು ಶ್ರುತಿ ಮೃದಂಗವು ದೊಡ್ಡದಾಗಿರುತ್ತದೆ.



ಮೃದಂಗ

ಮೃದಂಗದ ಎಡಭಾಗವನ್ನು ಎಡವೆಂದೂ, ಬಲಭಾಗವನ್ನು ಬಲವೆಂದೂ ಕರೆಯಲಾಗಿದೆ. ಈ ಎರಡು ಭಾಗವನ್ನೂ ಚರ್ಮದ ಪದರಗಳಿಂದ ಮುಚ್ಚಲಾಗಿದೆ. ಆ ಕಾರಣ ಎಡಕ್ಕೆ ಎಡ ಮುಚ್ಚಿಗೆಯೆಂದೂ ಬಲಕ್ಕೆ ಬಲಮುಚ್ಚಿಗೆಯೆಂದೂ ಕರೆಯಲಾಗಿದೆ. ಎಡಮುಚ್ಚಿಗೆಯ ಮೊದಲನೆಯ ಪದರವು ಮೇಕೆಯ ಚರ್ಮವಾಗಿದ್ದು ಇದನ್ನು ಜೀವಾಳ ಚರ್ಮವೆನ್ನುತ್ತಾರೆ. ಇದರ ಮೇಲೆ ಚಕ್ರಾಕಾರದ ಎರಡು ಸೆಂಟಿಮೀಟರಿನ ವ್ಯಾಸವುಳ್ಳ ಸ್ವಲ್ಪ ಒರಟಾದ ಆಕಳ ಚರ್ಮವನ್ನು ಅಂಟಿಸಲಾಗುತ್ತದೆ. ಇದನ್ನು ರೆಪ್ಪೆ ಚರ್ಮವೆನ್ನುತ್ತಾರೆ. ಸುತ್ತಲೂ ರಂಧ್ರಗಳಿರುವ ಈ ಎಡಮುಚ್ಚಿಗೆಯನ್ನು ಮರ ವಜ್ರವನ್ನು ಲೇಪಿಸಿ ದಾರದ ಮೂಲಕ ಎಡಹೊಳವಿಗೆ ಅಂಟಿಸಲಾಗುತ್ತದೆ. ಈ ರಂಧ್ರವನ್ನು ಕಣ್ಣೆಂದು ಕರೆಯಲಾಗಿದೆ.

ಬಲಮುಚ್ಚಿಗೆಯ ಮೂರು ಪದರಗಳಲ್ಲಿ ಮೊದಲನೆಯದು ಮೇಕೆ ಚರ್ಮವಾಗಿದ್ದು ಇದನ್ನು ಒತ್ತು ಚರ್ಮವೆಂದು ಕರೆಯಲಾಗಿದೆ. ಎರಡನೆಯದೂ ಸಹ ಮೇಕೆ ಚರ್ಮವಾಗಿದ್ದು ಇದನ್ನು ಜೀವಾಳಿ ಚರ್ಮವೆನ್ನುತ್ತಾರೆ. ಮೂರನೆಯದು ಆಕಳ ಚರ್ಮವಾಗಿದ್ದು ಇದನ್ನು ರೆಪ್ಪೆ ಚರ್ಮವೆನ್ನುತ್ತಾರೆ. ಸುತ್ತಲೂ ರಂಧ್ರಗಳಿರುವ ಈ ಚರ್ಮದ ಪದರಗಳನ್ನು ಮರವಜ್ರವನ್ನು ಹಚ್ಚಿ ದಾರದ ಮೂಲಕ ಬಲ ಹೊಳವಿಗೆ ಅಂಟಿಸಲಾಗುತ್ತದೆ. ರೆಪ್ಪೆ ಚರ್ಮದ ಮೇಲೆ ವೃತ್ತಾಕಾರದಲ್ಲಿ ಸುಮಾರು ಏಳು ಸೆಂಟಿಮೀಟರಷ್ಟು ವ್ಯಾಸವುಳ್ಳ ಕರಣೆಯನ್ನು ಹಚ್ಚಲಾಗುತ್ತದೆ. ಕರಣೆಯ ಪುಡಿಯನ್ನು ಮ್ಯಾಂಗನೀಸ್ ಪುಡಿ, ಗುಲಗಂಜಿ ಸರಿ, ಅಕ್ಕಿ ಸರಿ ಮತ್ತು ಹುಣಸೇ ಹಣ್ಣಿನ ರಸಗಳ ಮಿಶ್ರಣದಿಂದ ತಯಾರಿಸಲಾಗುತ್ತದೆ. ಸಾಣೆಕಲ್ಲಿನಿಂದ ಉಜ್ಜಿ, ಈ ಪುಡಿಯನ್ನು ಸ್ವಲ್ಪಸ್ವಲ್ಪವಾಗಿ ಹಚ್ಚಲಾಗುತ್ತದೆ. ಮಧ್ಯೆ ಸ್ವಲ್ಪ ದಪ್ಪನಾಗಿಯೂ, ಸುತ್ತಲೂ ತೆಳುವಾಗಿರುವ ಈ ಕರಣೆಯ ಮೇಲೆ ಸಣ್ಣ ರಂಧ್ರಗಳು ಏರ್ಪಡುತ್ತವೆ. ಇವೇ ನಾದರಂಧ್ರಗಳು.

ಎಮ್ಮೆಯ ಚರ್ಮದಿಂದ ತಯಾರಾದ ಬಾರುಗಳನ್ನು ಕಣ್ಣಿನ ಮೂಲಕ ತೂರಿಸಿ ಎಡಬಲಗಳನ್ನು ಎಳೆದು ಬಿಗಿಯಲಾಗುತ್ತದೆ. ಈ ಚರ್ಮದ ಬಾರುಗಳನ್ನು ಎಡಬಲಗಳಲ್ಲಿ ಹೆಣೆಯಲಾಗಿದ್ದು ಇದನ್ನು ಇಂಡಿಗೆಯೆಂದು ಕರೆಯಲಾಗಿದೆ. ಮೃದಂಗವನ್ನು ಶ್ರುತಿ ಮಾಡುವಾಗ ಇಂಡಿಗೆಯ ಮೇಲೆ ಅಥವಾ ಕಣ್ಣಿನ ಕೆಳಗೆ ಮರದ ತುಂಡಿನ ಮೂಲಕ ಸಾಣೆಕಲ್ಲಿನಿಂದ ಹೊಡೆದು ಶ್ರುತಿ ಮಾಡಲಾಗುತ್ತದೆ. ಬಾರುಗಳ ಮಧ್ಯೆ ಮರದ ತುಂಡುಗಳನ್ನು (ಗಟ್ಟಾಗಳು) ತೂರಿಸಿದಾಗ ಮೃದಂಗದ ಶ್ರುತಿಯು ಏರುತ್ತದೆ. ಬಾರುಗಳನ್ನು ಬಿಗಿಗೊಳಿಸಿದಾಗ ಶ್ರುತಿಯು ಏರುತ್ತದೆ. ಸಡಿಲಗೊಳಿಸಿದಾಗ ಇಳಿಯುತ್ತದೆ. ಮೃದಂಗದ ತಯಾರಿಕೆಯ ಹಂತದಲ್ಲೇ ಶ್ರುತಿಯನ್ನು ನಿರ್ಧರಿಸಲಾಗುತ್ತದೆ. ನುಡಿಸುವ ಮೊದಲು ಹದವಾಗಿ ಕಲಸಿದ ಸಣ್ಣರವೆಯನ್ನು ಎಡಭಾಗದ ಮಧ್ಯದಲ್ಲಿ ಎರಡೂವರೆ ಸೆಂಟಿಮೀಟರಿನಷ್ಟು ಹಚ್ಚಲಾಗುತ್ತದೆ. ಇದರಿಂದ ಹಿತವಾದ ನಾದವುಂಟಾಗುತ್ತದೆ. ಮೃದಂಗವನ್ನು ಆಧಾರ ಷಡ್ಜಕ್ಕೆ ಶ್ರುತಿ ಮಾಡಲಾಗುತ್ತದೆ.

## ಖಂಜರಿ :

ಕಂಜರೀ, ಖಂಜರೀ, ಕಂಜರ ಎಂದೂ ಕರೆಯಲಾಗುವ ಈ ವಾದ್ಯವು ಕರ್ನಾಟಕ ಸಂಗೀತ ಕಚೇರಿಗಳಲ್ಲಿ ಉಪತಾಳ ವಾದ್ಯವಾಗಿ ಮೆರೆಯುತ್ತಿದೆ. ಅವನದ್ಧ ಅಥವಾ ಚರ್ಮವಾದ್ಯಗಳ ಗುಂಪಿಗೆ ಸೇರುವ ಈ ವಾದ್ಯವು ಜನಪದ ಸಂಗೀತ ವಾದ್ಯವಾದ ತಮಟೆಯಿಂದ ರೂಪುಗೊಂಡಿತೆಂದು ಹೇಳಬಹುದು.

ಹಲಸಿನ ಮರದಿಂದ ತಯಾರಾಗುವ ಈ ವಾದ್ಯದ ವ್ಯಾಸವು ಇಪ್ಪತ್ತರಿಂದ ಇಪ್ಪತ್ತೈದು ಸೆಂಟಿಮೀಟರಿನಷ್ಟು ಇರುತ್ತದೆ. ಉದ್ದ ಅಥವಾ ಆಳವು ಏಳೂವರೆಯಿಂದ ಹತ್ತು ಸೆಂಟಿಮೀಟರಿನಷ್ಟಿರುತ್ತದೆ. ದಪ್ಪವು ಒಂದೂವರೆ ಸೆಂಟಿಮೀಟರಿನಷ್ಟಿರುತ್ತದೆ. ಈ ಮರದ ಕಟ್ಟನ್ನು ಹೊಳವು ಎಂದುಕರೆಯಲಾಗಿದೆ. ಹೊಳವಿನಲ್ಲಿ ಸಮಾನಾಂತರವಾದ ಎರಡು ರಂಧ್ರಗಳಿದ್ದು ಉಕ್ಕಿನ ತಂತಿಯ ಮೂಲಕ ಕಂಚು ಅಥವಾ ತಾಮ್ರದ ಬಿಲ್ಲೆಗಳನ್ನು ಪೋಣಿಸಲಾಗಿದೆ. ಉಡದ ಚರ್ಮವನ್ನು ಎಳೆದು ವೃತ್ತಾಕಾರದಲ್ಲಿ ಹೊಳವಿಗೆ ಮರ ವಜ್ರದ ಮೂಲಕ ಅಂಟಿಸಲಾಗುತ್ತದೆ. ವಾದ್ಯದ ತಯಾರಿಕೆಯ ಹಂತದಲ್ಲಿ ಶ್ರುತಿಯನ್ನು ನಿರ್ಧರಿಸಲಾಗುತ್ತದೆ. ಸೂಕ್ಷ್ಮ ವ್ಯತ್ಯಾಸವನ್ನು ಸರಿ ಮಾಡಲು ನೀರು ಹಚ್ಚಿದಾಗ ಕಡಿಮೆ ಶ್ರುತಿಯೂ, ಬೆಂಕಿಯಲ್ಲಿ ಕಾಯಿಸಿದಾಗ ಹೆಚ್ಚು ಶ್ರುತಿಯೂ ಉಂಟಾಗುತ್ತದೆ. ವಾದ್ಯವನ್ನು ಎಡಗೈಯ ಹಸ್ತದಲ್ಲಿ ಹಿಡಿದು ಬಲಗೈಯ ಬೆರಳುಗಳಿಂದ ನುಡಿಸಲಾಗುತ್ತದೆ.

## ಮೋರ್ಚಿಂಗ್ :

ಘನವಾದ್ಯ ಗುಂಪಿಗೆ ಸೇರುವ ಈ ವಾದ್ಯವನ್ನು ಮೋರ್ಚಿಂಗ್ ಎಂದು ಕರೆಯಲಾಗಿದೆ. ಇತ್ತೀಚೆಗೆ ಇದನ್ನು ಮೃಚ್ಚಂಗಿ ಎಂದು ಹಲವರು ಕರೆಯುತ್ತಿದ್ದಾರೆ.

ಉತ್ತಮ ಉಕ್ಕಿನಿಂದ ತಯಾರಾಗುವ ಈ ವಾದ್ಯವು ಚಾಕಟ್ಟು ಮತ್ತು ನಾಲಿಗೆಯೆಂಬ ಎರಡು ಭಾಗಗಳಿಂದ ಕೂಡಿದೆ. ಚೌಕಟ್ಟಿನ ಒಂದು ತುದಿಯು ವೃತ್ತಾಕಾರದಲ್ಲಿದ್ದು ಮತ್ತೊಂದು ತುದಿಯು ಉದ್ದಕ್ಕೆ ಶೂಲಾಕಾರದಲ್ಲಿದ್ದು ಸುಮಾರು ಹತ್ತು ಸೆಂಟಿಮೀಟರ್ ಉದ್ದವಿರುತ್ತದೆ. ವೃತ್ತದ ವ್ಯಾಸ ನಾಲ್ಕು ಸೆಂಟಿಮೀಟರ್. ನಾಲಗೆಯ ಉದ್ದವು ಹದಿನಾಲ್ಕು ಸೆಂಟಿಮೀಟರ್. ನಾಲಗೆಯ ತುದಿಯು ಒಂದು ಕಡೆ ಚಪ್ಪಟೆಯಾಗಿದ್ದು ಇನ್ನೊಂದು ತುದಿಯು ಚೂಪಾಗಿ ಮೀಟಲು ಅನುವು ಮಾಡಿಕೊಡಲು ಮೇಲಕ್ಕೆ ಬಗ್ಗಿಸಲಾಗಿದೆ. ಚಪ್ಪಟೆಯಾಗಿರುವ ತುದಿಯನ್ನು ವೃತ್ತಾಕಾರದ ಚೌಕಟ್ಟಿನ ಮಧ್ಯದ ಭಾಗವನ್ನು ಸ್ವಲ್ಪ ಕೊರೆದು ಕೂರಿಸಲಾಗಿದೆ. ಇತ್ತೀಚೆಗೆ ಸ್ಕ್ರೂ ಇಟ್ಟು ಜೋಡಿಸಲಾಗುತ್ತಿದೆ. ವಾದ್ಯ ತಯಾರು ಮಾಡುವಾಗಲೇ ಶ್ರುತಿಯನ್ನು ನಿರ್ಧರಿಸಲಾಗುತ್ತದೆ. ಶ್ರುತಿಯನ್ನು ಸ್ವಲ್ಪ ಕಡಿಮೆ ಮಾಡಬೇಕಾದರೆ ಮೇಣವನ್ನು ಉಪಯೋಗಿಸುತ್ತಾರೆ.

ಎಡಗೈಯ ಮುಷ್ಟಿಯಲ್ಲಿ ವಾದ್ಯವನ್ನು ಬಿಗಿಯಾಗಿ ಹಿಡಿದುಕೊಂಡು ತರಿಕಿಟಾದಿ ಶಬ್ದಗಳನ್ನು ಉಚ್ಚರಿಸುವಷ್ಟು ಸ್ಥಳವನ್ನು ಬಿಟ್ಟುಕೊಂಡು ಹಲ್ಲಿನ ಮುಂಭಾಗದಲ್ಲಿ ಬಾಯಿಯ ಬಲಭಾಗಕ್ಕೆ ಇಟ್ಟುಕೊಂಡು ನುಡಿಸಲಾಗುತ್ತದೆ. ತೋರ್ಬೆರಳು ಮತ್ತು ಮಧ್ಯದ ಬೆರಳುಗಳಿಂದ ಮೀಟಿ ನುಡಿಸಲಾಗುತ್ತದೆ.



ಮೋರ್ಚಿಂಗ್



ಖಂಜರಿ

ತಾಳ :

ನಾಗಸ್ವರ ಮೇಳದಲ್ಲಿ, ಭಜನೆಗಳಲ್ಲಿ ನೃತ್ಯ ಸಂಗೀತದ ನಟುವಾಂಗದಲ್ಲಿ ಕಂಡುಬರುವ ವಾದ್ಯವೇ ತಾಳ. ಘನವಾದ್ಯದ ಗುಂಪಿಗೆ ಸೇರುವ ತಾಳವು ಕಂಚಿನಿಂದ ಮಾಡಿರುವ ವಾದ್ಯ. ಇದು ಎರಡು ಭಾಗಗಳಾಗಿ ಒಂದರಿಂದ ಇನ್ನೊಂದನ್ನು ತಾಡನ ಮಾಡುವಾಗ ನಾದೋತ್ಪತ್ತಿಯಾಗುತ್ತದೆ. ಐದರಿಂದ ಎಂಟು ಸೆಂಟಿಮೀಟರ್ ವ್ಯಾಸವುಳ್ಳ ಈ ತಾಳವು ಮಧ್ಯದಲ್ಲಿ ಸ್ವಲ್ಪ ಉಬ್ಬಿರುತ್ತದೆ. ಮಧ್ಯದಲ್ಲಿ ಒಂದು ರಂಧ್ರವಿದ್ದು ಎರಡು ಭಾಗವನ್ನೂ ದಪ್ಪ ದಾರದಿಂದ ಕಟ್ಟಲಾಗಿದೆ. ದಾರದ ಗಂಟು ತಾಳದ ಒಳಭಾಗದಲ್ಲಿ ಇರುತ್ತದೆ. ತಯಾರಿಕೆಯ ಹಂತದಲ್ಲೇ ಶ್ರುತಿಯು ನಿರ್ಧಾರವಾಗಿರುತ್ತದೆ.

ನಾಗಸ್ವರ ಮೇಳದಲ್ಲಿ ಎಡಗೈಯಲ್ಲಿ ತಾಳವನ್ನು ಎತ್ತಿ ಹಿಡಿದು, ಆಯಾತಾಳಗಳಿಗನುಸಾರವಾಗಿ ಪೆಟ್ಟು ಬೀಳುವಲ್ಲಿ ಮಾತ್ರ ಬಲಗೈಯ ತಾಳದಿಂದ ಹೊಡೆಯಲಾಗುತ್ತದೆ. ಭಜನೆಗಳಲ್ಲಿ ಎಡಗೈ ಮತ್ತು ಬಲಗೈಯಲ್ಲಿ ತಾಳವನ್ನು ಎದುರುಬದುರಾಗಿ ಹಿಡಿದು ತಾಡನ ಮಾಡಲಾಗುತ್ತದೆ.



ನೃತ್ಯದಲ್ಲಿ ನಟುವಾಂಗದೊಡನೆ ಹಾಡುವಾಗ ತಾಳವನ್ನು ಎಡಗೈಯಲ್ಲಿ ಮೇಲ್ಮುಖವಾಗಿ ಹಿಡಿದು ಬಲಗೈಯ ತಾಳದ ಅಂಚಿನಿಂದ ಎಡಗೈಯ ತಾಳದ ಮೇಲೆ ಹೊಡೆಯಲಾಗುತ್ತದೆ.

## ಪತ್ರಿಕೆ - 2

## ಅಧ್ಯಾಯ - 8

## ರಾಗಗಳ ಲಕ್ಷಣ

### 1. ಮಾಯಾಮಾಳವಗೌಳ

ಆರೋಹಣ : ಸ ರಿ ಗ ಮ ಪ ದ ನಿ ಸ

ಅವರೋಹಣ : ಸ ನಿ ದ ಪ ಮ ಗ ರಿ ಸ

15ನೇ ಮೇಳಕರ್ತ 3ನೇ ಅಗ್ನಿ ಭೂ ಚಕ್ರದಲ್ಲಿ 3ನೇ ರಾಗ. ಮಾಳವಗೌಳ ಎಂಬ ಹೆಸರಿನಿಂದ ಪ್ರಚಾರದಲ್ಲಿದ್ದ ಈ ರಾಗಕ್ಕೆ ಕಟಪಯಾದಿ ಸೂತ್ರಕ್ಕೆ ಹೊಂದಿಕೊಳ್ಳುವಂತೆ ಮಾಯಾ ಎಂಬ ಮುಂಪ್ರತ್ಯಯವನ್ನು ಸೇರಿಸಲಾಗಿದೆ. ಅತ್ಯಂತ ಪ್ರಾಚೀನ ರಾಗಗಳಲ್ಲಿ ಒಂದು. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಶುದ್ಧರಿಷಭ, ಅಂತರ ಗಾಂಧಾರ, ಶುದ್ಧಮಧ್ಯಮ, ಪಂಚಮ, ಶುದ್ಧ ಧೈವತ, ಕಾಕಲಿ ನಿಷಾದ. ರಾಗಾಂಗರಾಗ. ಷಡ್ಜವು ಗ್ರಹಸ್ವರ. ಗಾಂಧಾರ ನಿಷಾದ ಸ್ವರಗಳು ನ್ಯಾಸಸ್ವರಗಳು. ಷಡ್ಜ, ಮಧ್ಯಮ, ಪಂಚಮ ಸ್ವರಗಳು ಅಂಶ ಸ್ವರಗಳು. ಗಾಂಧಾರ ನಿಷಾದಗಳು ಸಂವಾದಿ ಸ್ವರಗಳು. ಸರ್ವಕಾಲಿಕರಾಗ. ಕರುಣಾ, ಭಕ್ತಿ ರಸಪ್ರಧಾನ ರಾಗ. ರಕ್ತಿರಾಗ. ಈ ರಾಗದಲ್ಲಿ ಸರಳೆ, ಜಂಟಿವರಸೆ, ಅಲಂಕಾರಗಳನ್ನು ಪುರಂದರದಾಸರು ರಚಿಸಿರುತ್ತಾರೆ.

**ಸಂಚಾರ :**

ಸ ರಿ ಗ ಮ ಪ ದಾ ಪ, ಮ ಗ ರೀ ಗ ರಿ ಸ ನೀ

ಸ ರಿ ಗ ಮ ಪಾ ದ ಪ ಮ ಗ ಮಾ ಪ ದ ಪ ದ ಪಾೀ

ಪ ದ ನಿ ಸಾ ನಿ ಪ ದ ಮ ಪ ಮಾ ಪಾ ದ ಪ ಮ ಗಾ ರಿ ಸ ನೀ

ಸ ರಿ ಗ ಮ ಪ ದ ನಿ ಸಾ ರಿ, ಸ ನಿ ದಾ ಪಾ, ಮ ಗ ಪ ಮ ಗ ರಿ ಗಾ, ರಿ ಸ ನಿ ಸ

**ಪ್ರಸಿದ್ಧ ಕೃತಿಗಳು :**

ತ್ಯಾಗರಾಜರ **ಮೇರುಸಮಾನ** ಮತ್ತು **ತುಳಸೀದಳಮುಲಚೆ** ಕೃತಿ. ಪೊನ್ನಯ್ಯ ಪಿಳ್ಳೆಯವರ **ಮಾಯಾತೀತ ಸ್ವರೂಪಿಣಿ** ಎಂಬ ಕೃತಿಗಳು.

### 2. ಚಕ್ರವಾಕ

**ಆರೋಹಣ** : ಸ ರಿ ಗ ಮ ಪ ದ ನಿ ಸ

**ಅವರೋಹಣ** : ಸ ನಿ ದ ಪ ಮ ಗ ರಿ ಸ

16ನೇ ಮೇಳಕರ್ತ 3ನೇ ಅಗ್ನಿ ಭೂ ಚಕ್ರದಲ್ಲಿ 4ನೇ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಶುದ್ಧರಿಷಭ, ಅಂತರ ಗಾಂಧಾರ, ಶುದ್ಧಮಧ್ಯಮ, ಪಂಚಮ, ಚತುಶ್ರುತಿ ಧೈವತ, ಕೈಷಿಕಿ ನಿಷಾದ. ಈ ರಾಗಕ್ಕೆ ಶುದ್ಧ ರಿಷಭ ಮತ್ತು ಕೈಶಿಕಿ ನಿಷಾಧಗಳು ಜೀವಸ್ವರಗಳು. ರಿಷಭ, ಮಧ್ಯಮ, ನಿಷಾಧಗಳು ನ್ಯಾಸ ಸ್ವರಗಳು. ಕರುಣಾ ರಸವುಳ್ಳ ರಾಗ. ತ್ರಿಸ್ಥಾಯಿಯಲ್ಲೂ ಹಾಡಬಹುದಾದ ರಾಗ. ಷಡ್ಜ, ಪಂಚಮ, ಮಧ್ಯಮ, ಗಾಂಧಾರ ಸ್ವರಗಳಿಂದ ಪ್ರಾರಂಭಿಸಬಹುದು. ರಾಗಾಂಗರಾಗ.

### ಸಂಚಾರ :

ಸರಿಗಮಾ ಗಮಪದನಿದಪಮಾ ಗರಿಗಮಗರಿಸಾ, ರಿಸನಿಧನೀ ಸರಿಗಮಪಾ, ದನಿಸರೀಸ ರಿಗಮಗರಿಸ ನಿರಿಸನಿದನಿಸ ನಿದಪಮಗರಿ ಗಮಪಮಗರಿಸ, ನಿದಪದನಿಸ.

ಪ್ರಸಿದ್ಧ ರಚನೆಗಳು ತ್ಯಾಗರಾಜರ **ಎಟುಲ ಬ್ರೋತುವೋ** ಮತ್ತು **ಸುಗುಣಮುಲೆ** ಎಂಬ ಕೃತಿ, ಮೈಸೂರು ಕರಿಗಿರಿರಾಯರ **ನೀವೇಪಾಲಿಂಚರ.**

### 3. ಖರಹರಪ್ರಿಯ

**ಆರೋಹಣ** : ಸ ರಿ ಗ ಮ ಪ ದ ನಿ ಸ

**ಅವರೋಹಣ** : ಸ ನಿ ದ ಪ ಮ ಗ ರಿ ಸ

ಈ ರಾಗವು ಜನಕರಾಗ. 22 ಮೇಳಕರ್ತರಾಗ ವೇದಚಕ್ರದ 4ನೇ ರಾಗ. ಅಸಂಪೂರ್ಣ ಮೇಳ ಪದ್ಧತಿಯ ಪ್ರಕಾರ ಶ್ರೀರಾಗವು 22ನೇ ಮೇಳವಾಗಿತ್ತು. ಈ ಪದ್ಧತಿಯನ್ನು ಅನುಸರಿಸಿ ಮುತ್ತುಸ್ವಾಮಿ ದೀಕ್ಷಿತರೂ, ಶ್ಯಾಮಾಶಾಸ್ತ್ರಿಗಳೂ ಕೃತಿ ರಚಿಸಿರುವ ಕಾರಣ ಖರಹರಪ್ರಿಯ ರಾಗದಲ್ಲಿ ಇವರ ರಚನೆಗಳಿಲ್ಲ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಚತುಶ್ರುತಿ ರಿಷಭ, ಸಾಧಾರಣ ಗಾಂಧಾರ, ಶುದ್ಧಮಧ್ಯಮ ಪಂಚಮ, ಚತುಶ್ರುತಿ ಧೈವತ ಕೈಶಿಕಿ ನಿಷಾದ.

ಸಾಧಾರಣ ಗಾಂಧಾರ, ಚತುಶ್ರುತಿ ಧೈವತ, ಕೈಶಿಕಿ ನಿಷಾದ ಶುದ್ಧ ಮಧ್ಯಮಗಳು ಜೀವಸ್ವರಗಳು. ಸರ್ವಕಾಲಿಕರಾಗ, ರಂಜನೀಯರಾಗ. ರಿಷಭ ಪಂಚಮ, ಧೈವತ ನ್ಯಾಸಸ್ವರಗಳು. ಷಡ್ಜ, ಪಂಚಮ, ರಿಷಭ, ಧೈವತ, ಗಾಂಧಾರ, ನಿಷಾಧಗಳು ಸಂವಾದಿ ಸ್ವರಗಳು. ಈ ರಾಗಕ್ಕೆ ಹರಪ್ರಿಯ ಎಂಬ ಹೆಸರಿತ್ತು. ಕ. ಟ. ಪ. ಯಾದಿ ಸೂತ್ರಕ್ಕೆ ಅನುಸಾರವಾಗಿ ಖರ ಎಂಬ ಮುಂಪ್ರತ್ಯಯವನ್ನು ಸೇರಿಸಿ ಖರಹರಪ್ರಿಯ ಎಂಬ ಹೆಸರು ರೂಢಿಯಲ್ಲಿದೆ.

### ಸಂಚಾರ :

ರಿಗ ಮಪದಾ, ಪಮಾಗರೀ, ರಿಗಮಪದನೀ, ದಪಮಗರಿ, ಪಮಗರಿಗಸ, ಪಮನಿದಪಾ, ನಿದಪಮಗಾ, ರಿಗಮಪದನಿಸಾ, ನಿಗರಿನೀ : ಸರಿಗಮಗಾ : ಗರಿಸನಿದ, ಪದನಿಸ : ನಿದಪಮಗ ರಿಸಾ, ಗರಿಸನಿದನಿಸಾ.

### ಪ್ರಸಿದ್ಧ ರಚನೆಗಳು :

ತ್ಯಾಗರಾಜರ **ಚಕ್ಕನಿ ರಾಜ, ರಾಮನೀ ಸಮಾನಮೆವರು** ಕೃತಿಗಳು ಪ್ರಸಿದ್ಧವಾಗಿವೆ.

### 4. ಶಂಕರಾಭರಣ

**ಆರೋಹಣ** : ಸ ರಿ ಗ ಮ ಪ ದ ನಿ ಸ

**ಅವರೋಹಣ** : ಸ ನಿ ದ ಪ ಮ ಗ ರಿ ಸ

ಈ ರಾಗವು 29ನೇ ಮೇಳಕರ್ತರಾಗ. 5ನೇ ಬಾಣ ಚಕ್ರದ 5ನೇ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಚತುಶ್ಶ್ರುತಿರಿಷಭ, ಅಂತರಗಾಂಧಾರ, ಶುದ್ಧಮಧ್ಯಮ, ಪಂಚಮ ಚತುಶ್ರುತಿ ಧೈವತ, ಕಾಕಲಿ ನಿಷಾದ. ನಿಷಾದ ಗಾಂಧಾರ ಮಧ್ಯಮ ಪಂಚಮ ಜೀವಸ್ವರಗಳು. ಜಂಟೀಸ್ವರ ಪ್ರಯೋಗಗಳು ದಾಟುಸ್ವರ ಪ್ರಯೋಗಗಳು, ಈ ರಾಗದಲ್ಲಿ ವಿಶೇಷವಾಗಿ ಬರುತ್ತದೆ. ಸರ್ವಕಾಲೀಕರಾಗ, ತ್ರಿಸ್ಥಾಯಿಯಲ್ಲಿ ಹಾಡಬಹುದು. ಸರ್ವಸ್ವರ ಮೂರ್ಛನಕಾರಕ ರಾಗ. ರಚನೆಗಳನ್ನು ಷಡ್ಜ, ಗಾಂಧಾರ, ಮಧ್ಯಮ ಮತ್ತು ತಾರಷಡ್ಜಗಳಲ್ಲಿ ಪ್ರಾರಂಭಿಸಬಹುದು. ಕರುಣಾರಸ ಭಕ್ತಿಪ್ರಧಾನ ರಾಗ.

ಸಂಚಾರ :

ಮಗಮಪದನಿಸಾ, ಸನಿಸರೀಸ, ರಿಗಮ ಸಾಮಗರೀಸ, ಸನಿಗರಿಸನಿದಾಪ, ಗಮಪಗರೀಸ, ಗಗಮಮದದನಿನಿ, ಗರಿಸನಿದಪ, ಮಾಪಗರೀಸ, ಸದನೀಸಾರೀ, ಮಾಪರೀಸ.

ಪ್ರಸಿದ್ಧ ರಚನೆಗಳು :

ತ್ಯಾಗರಾಜರ **ಸ್ವರರಾಗಸುಧಾ**. ಮುತ್ತುಸ್ವಾಮಿ ದೀಕ್ಷಿತರ **ಅಕ್ಷಯ ಲಿಂಗವಿಭೋ** ಎಂಬ ಕೃತಿಗಳು.

## 5. ಕಾಂಭೋಜಿ

**ಆರೋಹಣ** : ಸ ರಿ ಗ ಮ ಪ ದ ಸ

**ಅವರೋಹಣ** : ಸ ನಿ ದ ಪ ಮ ಗ ರಿ ಸ

ಈ ರಾಗವು 28ನೇ ಮೇಳಕರ್ತ ಹರಿಕಾಂಭೋಜಿಯಲ್ಲಿ ಜನ್ಯ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಚತುಶ್ರುತಿರಿಷಭ, ಅಂತರ ಗಾಂಧಾರ, ಶುದ್ಧ ಮಧ್ಯಮ, ಚತುಶ್ರುತಿ ಧೈವತ. ಅವರೋಹಣದಲ್ಲಿ ಕೈಶಿಕಿ ನಿಷಾದ (ಕಾಕಲಿ ನಿಷಾದ), ಷಾಡವ ಸಂಪೂರ್ಣ ರಾಗ. ಭಾಷಾಂಗರಾಗ, ಅಂತರ ಗಾಂಧಾರ, ಚತುಶ್ರುತಿ ಧೈವತಗಳು ರಾಗ ಛಾಯಾಸ್ವರಗಳು. ಸ, ಮತ್ತು ಪ ನ್ಯಾಸ ಸ್ವರಗಳು, ಕಾಕಲಿ ನಿಷಾದ ಅನ್ಯಸ್ವರ, ರಂಜನೀಯವಾದ ರಕ್ತಿರಾಗ, ವರ್ಜ್ಯರಾಗ. ಸನಿ$_3$ಪ ಎಂಬಲ್ಲಿ ಕಾಕಲಿನಿಷಾದ ಪ್ರಯೋಗವಿದೆ. ಆರೋಹಣದಲ್ಲಿ ನಿಷಾದ ವರ್ಜ್ಯ. ತ್ರಿಸ್ಥಾಯಿಗಳಲ್ಲೂ ಸಂಚಾರವಿರುವ ಪ್ರಸಿದ್ಧರಾಗ.

ಸಂಚಾರ :

ಮಾಗಸಾ ಸನಿ$_3$ಪದಸಾ, ಸರಿಗಮಪದಸಾ, ಸರಿಗಮಪದಮಗಪದಸಾ, ಪಮಪದಸಾ, ಪದಸರಿಗರಿಸಾ, ನಿದಸರಿಗರೀಸನಿದಪಾ, ದಸರಿಗಮಾ, ಮಾಗಗರಿಸಾ ಸಸನಿದ, ಪಾದಪಪಮಗ ಗರೀಸ, ಸನಿ$_3$ಪಾದಸಾ.

ಪ್ರಸಿದ್ಧ ರಚನೆಗಳು :

ತ್ಯಾಗರಾಜರ **ಎವರಿಮಾಟ**, ಮುತ್ತುಸ್ವಾಮಿ ದೀಕ್ಷಿತರ **ಶ್ರೀ ಸುಬ್ರಹ್ಮಣ್ಯಾಯ ನಮಸ್ತೇ** ಎಂಬ ಕೃತಿಗಳು.

## 6. ಕಲ್ಯಾಣಿ

**ಆರೋಹಣ** : ಸ ರಿ ಗ ಮ ಪ ದ ನಿ ಸ

**ಅವರೋಹಣ** : ಸ ನಿ ದ ಪ ಮ ಗ ರಿ ಸ

ಈ ರಾಗವು 65ನೇ ಮೇಳಕರ್ತ 11ನೇ ರುದ್ರ ಚಕ್ರದಲ್ಲಿ 5ನೇ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಚತುಶ್ರುತಿ ರಿಷಭ, ಅಂತರ ಗಾಂಧಾರ, ಪ್ರತಿ ಮಧ್ಯಮ, ಚತುಶ್ರುತಿ ಧೈವತ, ಕಾಕಲಿ ನಿಷಾದ. ಕ ಟ ಪ ಯಾದಿ ಸೂತ್ರಕ್ಕೆ ಅನುಸಾರವಾಗಿ ಮೇಚಕಲ್ಯಾಣಿ ಎಂಬ ಹೆಸರು ಬಂದಿರುತ್ತೆ. ಸರ್ವಗಮಕವರಿಕ, ರಕ್ತಿರಾಗ, ಆರೋಹಣ, ಅವರೋಹಣದಲ್ಲಿ ಬರುವ ಸ್ವರಗಳೂ ರಾಗ ಛಾಯಾಸ್ವರಗಳು. ರಿಷಭ, ಗಾಂಧಾರ, ಧೈವತ, ನಿಷಾದ ಸ್ವರಗಳು ನ್ಯಾಸ ಸ್ವರಗಳು. ಸರ್ವಕಾಲಿಕ ರಾಗ. ರಚನೆಗಳು ಷಡ್ಜ, ಚತುಶ್ರುತಿ ರಿಷಭ, ಅಂತರಗಾಂಧಾರ, ಪಂಚಮ, ನಿಷಾದ ಸ್ವರಗಳಲ್ಲಿ ಪ್ರಾರಂಭವಾಗಿವೆ. ಕಲ್ಯಾಣಿ ಪ್ರಸಿದ್ಧರಾಗ. ದಾಟುಸ್ವರ ಪ್ರಯೋಗ - ವಿಶೇಷ ಪ್ರಯೋಗ. ಗಾಂಧಾರ, ಪಂಚಮಗಳು, ದೀರ್ಘಸ್ವರಗಳು. ಷಡ್ಜ, ಪಂಚಮಗಳನ್ನು ವರ್ಜ್ಯಮಾಡಿ ಹಾಡುವುದು ಒಂದು ವಿಶೇಷ.

**ಸಂಚಾರ :**

ಗದಪಮಗಾರಿ, ರೀರೀಸಾರಿ, ರಿಸನ಼ಿಧ಼ನ಼ೀ ರೀಗಾಪಮ ಗದಪಮ, ಗಾರಿಗಾರಿಸರಿಗಾರಿ, ಸನಿದಪಮಗಾರಿ, ಪಮನಿದಪಮದಪಮಗಾರಿ ರೀಗನೀರ಼ಿ, ಧ಼ನ಼ಿರಿಗಮಪಗಾರಿಸಾೀ ಗರಿಸನ಼ಿಧ಼ನ಼ಿದ಼ನ಼ೀಧ಼ಗರಿಸಾ.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ **ಏತಾವುನ್ನರ, ನಿಧಿಚಾಲಸುಖಮಾ,** ಸ್ವಾತಿ ತಿರುನಾಳ್ ಮಹಾರಾಜರ **ಪಂಕಜಲೋಚನ** ಎಂಬ ಕೃತಿಗಳು ಹಾಗೂ ಪಲ್ಲವಿ ಗೋಪಾಲಯ್ಯನವರ **ಅಟತಾಳವರ್ಣ.**

## 7. ಮೋಹನ

**ಆರೋಹಣ** : ಸ ರಿ ಗ ಪ ದ ಸ಼

**ಅವರೋಹಣ** : ಸ಼ ದ ಪ ಗ ರಿ ಸ

28ನೇ ಮೇಳಕರ್ತ ಹರಿಕಾಂಭೋಜಿಯಲ್ಲಿ ಜನ್ಯ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಚತುಶ್ರುತಿ ರಿಷಭ, ಅಂತರ ಗಾಂಧಾರ, ಪಂಚಮ, ಚತುಶ್ರುತಿ ಧೈವತ. ಔಡವ-ಔಡವ ರಾಗ. ಮಧ್ಯಮ, ನಿಷಾದಗಳು ವರ್ಜ್ಯ. ಉಪಾಂಗರಾಗ. ಚತುಶ್ರುತಿ ರಿಷಭ, ಚತುಶ್ರುತಿ ಧೈವತ, ಅಂತರ ಗಾಂಧಾರ ಜೀವಸ್ವರಗಳು, ಗಾಂಧಾರ, ಪಂಚಮ, ಅಂಶಸ್ವರಗಳು, ಸರ್ವಕಾಲಿಕರಾಗ, ತ್ರಿಸ್ಥಾಯಿಯಲ್ಲೂ ಹಾಡಬಹುದು. ರಚನೆಗಳು ಷಡ್ಜ, ಗಾಂಧಾರ, ಧೈವತಗಳಿಂದ ಪ್ರಾರಂಭವಾಗಿದೆ. ರಿಷಭ, ಗಾಂಧಾರ, ಧೈವತಗಳು ರಾಗ ಛಾಯಾಸ್ವರಗಳು. ಜಂಟೀಸ್ವರಗಳು, ದಾಟುಸ್ವರಗಳು ಈ ರಾಗಕ್ಕೆ ರಂಜನೀಯ.

**ಸಂಚಾರ :**

ದಸ಼ದಾಪಾ, ಗದಪಾದಾಪಗರೀಸ, ಸರಿಗಪದಸ಼ರಿ಼ಗಾ಼ಸಾ಼, ಸ಼ದರಿ಼ಸದಾಪಾ, ದಸ಼ರಿ಼ಗ಼ಪಗಾ಼ರಿ಼, ಸದರಿ಼ಸ಼ಗ಼ರಿ಼ರಿ಼ಸ಼, ದಾಪ, ಗಪದಸ಼ದಪಗರೀಸ, ಸರಿದ಼ಾಸ, ಗಗಪಪದದಸ಼ಸ಼ ರಿ಼ರಿ಼ಗಾ಼, ಗ಼ಪ಼ಗಾ಼ರಿ಼ಸ಼, ದಪದಾ, ದಗ಼ರಿ಼ಗ಼ಸ಼ರಿ಼, ದರಿ಼ಸ಼ರಿ಼ದಸ಼ಪದ, ಪಸ಼ದಪಗರೀಸ.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ **ಎವರು ರಾ ನಿನ್ನುವಿನಾ,** ಮೈಸೂರು ವಾಸುದೇವಾಚಾರ್ಯರ **ರಾ ರಾ ರಾಜೀವ ಲೋಚನ ರಾಮ** ಎಂಬ ಕೃತಿಗಳು.

## 8. ಹಂಸಧ್ವನಿ

**ಆರೋಹಣ** : ಸ ರಿ ಗ ಪ ನಿ ಸ಼

**ಅವರೋಹಣ** : ಸ಼ ನಿ ಪ ಗ ರಿ ಸ

29ನೇ ಧೀರ ಶಂಕರಾಭರಣದಲ್ಲಿ ಜನ್ಯ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಚತುಶ್ರುತಿ ರಿಷಭ, ಅಂತರ ಗಾಂಧಾರ, ಪಂಚಮ, ಕಾಕಲಿನಿಷಾದ. ಔಡವ-ಔಡವ ರಾಗ. ಮಧ್ಯಮ, ಧೈವತಗಳು ವರ್ಜ್ಯ. ಗಾಂಧಾರ, ನಿಷಾದಸ್ವರಗಳು. ರಾಗ ಛಾಯಾಸ್ವರಗಳು. ಸರ್ವಕಾಲಿಕ ರಾಗ. ಸರ್ವ ಗಮಕ ವರಿಕ, ರಕ್ತಿರಾಗ, ರಚನೆಗಳು ಗಾಂಧಾರ, ಪಂಚಮ, ಷಡ್ಜ ಸ್ವರಗಳಿಂದ ಪ್ರಾರಂಭವಾಗಿವೆ. ವೀರರಸ ಪ್ರಧಾನರಾಗ. ಎಲ್ಲಾ ಸ್ವರಗಳೂ ಛಾಯಾಸ್ವರಗಳು. ಮುತ್ತುಸ್ವಾಮಿ ದೀಕ್ಷಿತರ ತಂದೆ ರಾಮಸ್ವಾಮಿ ದೀಕ್ಷಿತರು ಈ ರಾಗವನ್ನು ಕಂಡುಹಿಡಿದವರು.

ಸಂಚಾರ :

ಗ ಪ ನಿ ಸ̇ ರಿ̇ ಗ̇ಾ ರಿ̇, ಸ̇ ರಿ̇ ಗ̇ ಪ̇ ಗ̇ ರೀ̇ ಸ̇,

ಸ̇ ನಿ ಗ̇ ರಿ̇ ಸ̇ ನಿ ಪಾ, ಗ ಪ ನಿ ಪ ಗಾ ಗ, ಪ ಗ,

ನಿ ಪ̇ ಸ̇ ನಿ ರಿ̇ ಸ̇ ಗ̇ ರಿ̇ ಸ̇ ನಿ ಪ ಗಾ ರಿ ಗ ಪ ಗ ರೀ ಸ,

ಸ ನಿ ರಿ ಸ ನ಼ಿ ಪ಼ ಗಾ಼ ಪ಼ ಪ಼ ನ಼ಿ ನ಼ಿ ಸಾ.

ಪ್ರಸಿದ್ಧ ರಚನೆಗಳು :

ಮುತ್ತುಸ್ವಾಮಿ ದೀಕ್ಷಿತರ **ವಾತಾಪಿಗಣಪತಿಂಭಜೇ,** ಮೈಸೂರು ವಾಸುದೇವಾಚಾರ್ಯರ **ವಂದೇನಿಶವಮಹಂ** ಎಂಬ ಕೃತಿಗಳು.

## 9. ಹಿಂದೋಳ

**ಆರೋಹಣ** : ಸ ಗ ಮ ದ ನಿ ಸ̇

**ಅವರೋಹಣ** : ಸ̇ ನಿ ದ ಮ ಗ ಸ

20ನೇ ಮೇಳಕರ್ತ ನಠಭೈರವಿಯಲ್ಲಿ ಜನ್ಯ. ಈ ರಾಗಕ್ಕೆ ಷಡ್ಜ, ಸಾಧಾರಣ ಗಾಂಧಾರ, ಶುದ್ಧಮಧ್ಯಮ, ಶುದ್ಧ ದೈವತ, ಕೈಶಿಕಿ ನಿಷಾದ ಸ್ವರಗಳು ಬರುತ್ತವೆ. ಉಪಾಂಗ ರಾಗ, (ವಕ್ರ ಔಡವ-ಔಡವ ರಾಗ.) ಆರೋಹಣ - ಅವರೋಹಣಗಳಲ್ಲಿ ರಿಷಭ, ಪಂಚಮಗಳು ವರ್ಜ್ಯ. ತ್ರಿಸ್ಥಾಯಿರಾಗ, ಸರ್ವಸ್ವರ ಗಮಕ ವರಿಕ ರಕ್ತಿರಾಗ. ಮೂರ್ಛನಕಾರಕರಾಗ.

ಸಂಚಾರ :

ಮಾ ದ ಮ ಗ ಸಾ, ನಿ ಸ ನಿ ಗ ಸ ನಿ ದ ನೀ ದ

ಮ ಗ ಸ ಮಾ ಗ ದಾ ಮ, ನೀ ದ ಸ̇ ನಿ ನೀ ಸ̇ಾ, ನಿ ಸ̇ ಗ̇ ಮ̇ಾ ಗ̇ ಸ̇ ದಾ ನಿ ಗ̇ ಸ̇ ದಾ,

ಸ̇ ನಿ ದ ನಿ ದ ಮ, ಗ ಮ ದ ಮ ಗ ಸಾ, ನಿ ಗ ಸಾ ಧ಼ಾ ನ಼ಿ ನ಼ಿ ಸಾ.

ಪ್ರಸಿದ್ಧ ರಚನೆಗಳು :

ತ್ಯಾಗರಾಜರ - ಸಾಮಜವರಗಮನ, ಮೈಸೂರು ವಾಸುದೇವಾಚಾರ್ಯರ ಮಾಮವತು ಶ್ರೀ ಸರಸ್ವತೀ ಎಂಬ ಕೃತಿಗಳು.

## 10. ಶ್ರೀ ರಂಜನಿ

**ಆರೋಹಣ** : ಸ ರಿ ಗ ಮ ದ ನಿ ಸ̇.

**ಅವರೋಹಣ** : ಸ̇ ನಿ ದ ಮ ಗ ರಿ ಸ.

22ನೇ ಮೇಳಕರ್ತ ಖರಹರಪ್ರಿಯ ರಾಗದಲ್ಲಿ ಜನ್ಯ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಚತುಶ್ರುತಿ ರಿಷಭ, ಸಾಧಾರಣ ಗಾಂಧಾರ, ಶುದ್ಧಮಧ್ಯಮ, ಚತುಶ್ರುತಿ ಧೈವತ, ಕೈಶಿಕಿ ನಿಷಾದ. ಉಪಾಂಗ ರಾಗ. ಪಂಚಮ ವರ್ಜ್ಯ, ಷಾಡವ ರಾಗ. ಸರ್ವಕಾಲಿಕ ರಾಗ, ಆರೋಹಣದ ರಿಷಭ, ಗಾಂಧಾರ, ಮಧ್ಯಮ, ಧೈವತ, ನಿಷಾದ ಸ್ವರಗಳು ಛಾಯಾಸ್ವರಗಳು.

**ಸಂಚಾರ :**

ನಿ ದ ಮಾಗ ರಿ ಗ ಸ ರಿ ಗ ಮಾ, ನಿ ದ ಮಾ, ನಿ ದ ನಿ ಸಾ̇,

ಸ̇ ನಿ ದ ಮಾ ಗ ರಿ ಗ ಮಾ, ನಿ ಗ̇ ರಿ̇ ಸಾ̇, ಮಾ̇ ಗ̇ ರಿ̇ ಸ̇,

ನಿ ದ ನಿ ರಿ̇ ಸ̇ ಸ̇ ನಿ ನಿ ದ ಮ ಗ ರಿ, ಗ ಮಾ ಗ ರಿ ಸ,

ನಿ̣ ದ̣ ನಿ̣ ಸಾ, ದ̣ ನಿ̣ ಸ ರಿ ಗ ರಿ ಸಾ.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ - **ಸೊಗಸುಗಾ** ಮೃದಂಗತಾಳಮು, **ಬ್ರೋಚೇವಾರೆವರೇ** ಕೃತಿಗಳು.

## 11. ಕಾಮವರ್ಧಿನಿ

**ಆರೋಹಣ** : ಸ ರಿ ಗ ಮ ಪ ದ ನಿ ಸ̇.

**ಅವರೋಹಣ** : ಸ̇ ನಿ ದ ಪ ಮ ಗ ರಿ ಸ.

51ನೇ ಮೇಳಕರ್ತರಾಗ. ಬ್ರಹ್ಮಚಕ್ರದ 3ನೇ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಶುದ್ಧ ರಿಷಭ, ಅಂತರ ಗಾಂಧಾರ, ಪ್ರತಿ ಮಧ್ಯಮ, ಪಂಚಮ, ಶುದ್ಧ ಧೈವತ, ಕಾಕಲಿ ನಿಷಾದ. ಸರ್ವಸ್ವರ ಗಮಕವರಿಕರಾಗ. ಗಾಂಧಾರ, ನಿಷಾದ, ರಿಷಭ, ಧೈವತಗಳು ಪರಸ್ಪರ ಸಂವಾದಿಗಳು. ಈ ರಾಗವನ್ನು ವಿಸ್ತಾರವಾಗಿ ಹಾಡಬಹುದು. ತ್ರಿಸ್ಥಾಯಿರಾಗ.

**ಸಂಚಾರ :**

ಪ ಮ ಗ ಮ ಗ ರೀ ಸ, ರೀ ಗ ರಿ ಸ ನಿ̣ ರಿ ರಿ ಗ ಗ ಮಾ ಗ,

ಮ ನಿ ದ ಪ ಮಾ ಗ ರೀ, ಸಾ̇ ಸ̇ ನಿ, ದ ಪ ಮ ಗ ರೀ ಗ ರೀ ಗ ರಿ ಸ ನಿ̣,

ದ ಪ ಮಾ ಗ ರೀ, ಪ ಮಾ ಗ ರೀ ಸ, ರಿ ಗ ರಿ ಸ ನಿ̣, ಸ ನೀ̣ ದ̣ ನೀ̣ ಸಾ.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ - **ರಘುವರನನ್ನು** , ಮುತ್ತುಸ್ವಾಮಿ ದೀಕ್ಷಿತರ **ರಾಮನಾಥಂ** ಎಂಬ ಕೃತಿ.

## 12. ಬಿಲಹರಿ

**ಆರೋಹಣ** : ಸ ರಿ ಗ ಪ ದ ಸ̇

**ಅವರೋಹಣ** : ಸ̇ ನಿ ದ ಪ ಮ ಗ ರಿ ಸ

29ನೇ ಧೀರ ಶಂಕರಾಭರಣದಲ್ಲಿ ಜನ್ಯ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ , ಚತುಶ್ರುತಿ ರಿಷಭ, ಅಂತರ ಗಾಂಧಾರ, ಪಂಚಮ, ಚತುಶ್ರುತಿ ಧೈವತ. ಅವರೋಹಣದಲ್ಲಿ ಕಾಕಲಿ ನಿಷಾದ, ಶುದ್ಧಮಧ್ಯಮ. ಔಡವ ಸಂಪೂರ್ಣ ರಾಗ. ಏಕಾನ್ಯಸ್ವರ ಭಾಷಾಂಗ ರಾಗ. ಪದನಿ$_{2}$ ಎಂಬಲ್ಲಿ ಕೈಶಿಕಿ ನಿಷಾದ ಬರುತ್ತದೆ. ತ್ರಿಸ್ಥಾಯಿ ರಾಗ, ಸರ್ವಕಾಲಿಕರಾಗ, ರಿಷಭ, ಧೈವತಗಳು ರಾಗಛಾಯಾಸ್ವರಗಳು. ಷಡ್ಜ, ಪಂಚಮ, ಸ್ವರಗಳಿಂದ ರಚನೆಗಳು ಪ್ರಾರಂಭವಾಗಿವೆ. ಆರೋಹಣದಲ್ಲಿ ಮಧ್ಯಮ, ನಿಷಾದಗಳು ವರ್ಜ್ಯ. ಸರ್ವಗಮಕವರಿಕ ರಕ್ತಿ ರಾಗ.

ಸಂಚಾರ :

ಸ ರಿ ಗ ಪ ದ ಪಾ, ದ ರಿ ಸ ನಿ ದ ಪಾ, ಮ ಗ ರಿ ಗ ರೀ,

ಸ ರಿ ಗ ಪ ಮಾ ಗ ರಿ ಗ ಸಾ, ರಿ ಗ ಗ ಪ ಪ ದ ದ ಸ ಸ ರಿ,

ಗ ಪ ಮಾಗ ರಿ ಗ ರಿ ಸಾ, ಸ ನಿ ದ ಪ ದ ಪಾ ಮಾ ಗ ರಿ ಗ ರಿ ಸ, ನಿ ದ ಸಾ.

ಪ್ರಸಿದ್ಧ ರಚನೆಗಳು :

ತ್ಯಾಗರಾಜರ - **ನಾಜೀವಾಧಾರ,** ಪಟ್ಣಂ ಸುಬ್ರಹ್ಮಣ್ಯ ಅಯ್ಯರ್‌ರವರ **ಪರಿದಾನಮಿಚ್ಚಿತೇ,** ಮೈಸೂರು ವಾಸುದೇವಾಚಾರ್ಯರ **ಶ್ರೀ ಚಾಮುಂಡೇಶ್ವರಿ** ಎಂಬ ಕೃತಿಗಳು.

## 13. ಸಿಂಹೇಂದ್ರ ಮಧ್ಯಮ

**ಆರೋಹಣ** : ಸ ರಿ ಗ ಮ ಪ ದ ನಿ ಸ

**ಅವರೋಹಣ** : ಸ ನಿ ದ ಪ ಮ ಗ ರಿ ಸ

57ನೇ ಮೇಳಕರ್ತ ರಾಗ. ಈ ರಾಗವು 10ನೇ ದಿಶಿ ಚಕ್ರದ 3ನೇ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಚತುಶ್ರುತಿ ರಿಷಭ, ಸಾಧಾರಣ ಗಾಂಧಾರ, ಪ್ರತಿ ಮಧ್ಯಮ, ಪಂಚಮ, ಶುದ್ಧ ಧೈವತ, ಕಾಕಲಿ ನಿಷಾದ. ಸಂಪೂರ್ಣ ರಾಗ. ಅಸಂಪೂರ್ಣ ಮೇಳ ಪದ್ಧತಿಯಲ್ಲಿ ಸುಮದ್ಯುತಿ ಎಂದು ಕರೆಯಲಾಗಿದೆ. ರಿಷಭ, ಮಧ್ಯಮ, ಪಂಚಮ, ನಿಷಾದಗಳು ನ್ಯಾಸ ಸ್ವರಗಳು. ಸರ್ವಕಾಲಿಕ ರಾಗ.

ಸಂಚಾರ :

ಸ ರಿ ಗ ರಿ ಸ ನಿ ದ ನೀ ಸಾ, ರಿ ಗ ಮ ಪಾ ಮ ಗ ರೀ ಸ

ಪಾ ದ ನಿ ದ ಪ ಮ, ಪ ದ ನೀ, ದ ನಿ ಸ ರಿ ಗಾ ರಿ ಸ

ನಿ ದ ಪದ ನಿ ಸ, ರೀ ಗ ರಿ, ಸ ನಿ ಸ ರಿ, ಗ ಮ ಪ ಮ, ಗಾ ರೀ ಸಾ

ನಿ ರಿ ಸ ನಿ ದಾ ಪಾ, ಗ ಮ ಪ ದ ಪ ಮ ಗಾ ರೀ, ಗ ರಿ ಸ ನಿ ದ ನೀ ಸಾ, ಸ ನಿ ಸ ರೀ ಸ

ಪ್ರಸಿದ್ಧ ರಚನೆಗಳು :

ಮೈಸೂರು ವಾಸುದೇವಾಚಾರ್ಯರ **ನೀಕೆಂದುಕು,** ಸ್ವಾತಿ ತಿರುನಾಳ್‌ರವರ **ರಾಮ ರಾಮ ಗುಣಸೀಮ** ಎಂಬ ಕೃತಿಗಳು.

## 14. ಭೈರವಿ

**ಆರೋಹಣ** : ಸ ರಿ ಗ ಮ ಪ ದ ನಿ ಸ

**ಅವರೋಹಣ** : ಸ ನಿ ದ ಪ ಮ ಗ ರಿ ಸ

20ನೇ ಮೇಳಕರ್ತ ನಠಭೈರವಿಯಲ್ಲಿ ಜನ್ಯ. ಸ ಗ ರಿ ಗ ಮ ಪ ದ ನಿ ಸ ಎಂಬ ವಕ್ರ ಸಂಪೂರ್ಣ - ಆರೋಹಣವೂ ರೂಢಿಯಲ್ಲಿದೆ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ , ಚತುಶ್ರುತಿ ರಿಷಭ, ಸಾಧಾರಣ ಗಾಂಧಾರ, ಶುದ್ಧ ಮಧ್ಯಮ, ಪಂಚಮ, ಚತುಶ್ರುತಿ ಧೈವತ, ಕೈಶಿಕಿ ನಿಷಾದ. ಅವರೋಹಣದಲ್ಲಿ ಶುದ್ಧ ಧೈವತ, ಸಂಪೂರ್ಣ

ಆರೋಹಣ ಮತ್ತು ಅವರೋಹಣವನ್ನು ಹೊಂದಿರುವ ಜನ್ಯರಾಗ. ಏಕಾನ್ಯಸ್ವರವನ್ನು ಹೊಂದಿದೆ. ರಿಷಭ, ಮಧ್ಯಮ, ನಿಷಾದ ಸ್ವರಗಳು ರಾಗಛಾಯಾ ಸ್ವರಗಳು. ಸರ್ವಸ್ವರ ಗಮಕವರಿಕ ರಕ್ತಿರಾಗ. ಆರೋಹಣದಲ್ಲಿ ಬರುವ ಧೈವತವು ಚತುಶ್ರುತಿ ಧೈವತ, ಅವರೋಹಣದಲ್ಲಿ ಬರುವ ಧೈವತವು ಶುದ್ಧ ಧೈವತ. ತ್ರಿಸ್ಥಾಯಿ ರಾಗ. ರಿಷಭ, ಮಧ್ಯಮ, ಪಂಚಮ, ನಿಷಾದಗಳು. ದೀರ್ಘಸ್ವರಗಳು, ಸರ್ವಕಾಲಿಕರಾಗ. ರಚನೆಗಳು ಷಡ್ಜ, ರಿಷಭ, ಚತುಶ್ರುತಿ ಧೈವತ ಮತ್ತು ನಿಷಾದದಲ್ಲಿ ಪ್ರಾರಂಭವಾಗಿವೆ. ಭಕ್ತಿ, ಕರುಣರಸ ಪ್ರಧಾನ ರಾಗ.

**ಸಂಚಾರ :**

ನಿ̣ ಸ ರಿ ಸ ರಿ ಗ ಮ ಪ ದಾ ಪಾ, ಪ ದ$_2$ ನಿ ಸ̇ ರಿ̇ ಗ̇ ರಿ̇ ಸ̇

ನಿ ದಾ ಪಾ ಮ ಪ ಗಾ ರೀ ಸಾ. ಗ ಗ ರಿ ಗ ಮ ಪ, ದ ಪ ಮ ಪ ದ ನಿ$_2$ ಸಾ.

ರಿ ಸ ರೀ, ಗ ಗ ರಿ ಸ ರೀ ಸಾ, ನಿ ರಿ ನೀ ಧ̣ ಪ, ಧ̣ ಪ ಗಾ ರಿ ಸ,

ಗ ಗ ರಿ ಸ ರೀ ಸಾ, ಪ ದ ಪ ದ$_2$ ನೀ ದ ಪ ದ$_2$ ನಿ ಸ̇ಾ.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ **ಕೊಲುವೈಯುನ್ನಾಡೆ,** ಮುತ್ತುಸ್ವಾಮಿ ದೀಕ್ಷಿತರ **ಬಾಲಗೋಪಾಲ** ಎಂಬ ಕೃತಿಗಳು.

## 15. ಮಧ್ಯಮಾವತಿ

**ಆರೋಹಣ** : ಸ ರಿ ಮ ಪ ನಿ ಸ̇

**ಅವರೋಹಣ** : ಸ̇ ನಿ ಪ ಮ ರಿ ಸ

22ನೇ ಮೇಳಕರ್ತ ಖರಹರಪ್ರಿಯದಲ್ಲಿ ಜನ್ಯ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ , ಚತುಶ್ರುತಿ ರಿಷಭ, ಶುದ್ಧ ಮಧ್ಯಮ, ಪಂಚಮ, ಕೈಶಿಕಿ ನಿಷಾದ. ಉಪಾಂಗ ರಾಗ. ರಿಷಭ, ಮಧ್ಯಮ, ನಿಷಾದ ಸ್ವರಗಳು ರಾಗಛಾಯಾ ಸ್ವರಗಳು ಮತ್ತು ನ್ಯಾಸ ಸ್ವರಗಳು. ರಕ್ತಿ ರಾಗ, ಮಂಗಳಕರ ರಾಗ.

**ಸಂಚಾರ :**

ಮಾ ಪ ನಿ ಪಾ ನಿ ಪ ಮ ರೀ, ಪ ಮ ರಿ ಮ ಸ ರೀ ಸ,

ಸ ನಿ̣ ರಿ ಸ ನಿ ಪ, ನಿ ಸ ರೀ, ಸ ರಿ ಮ ಪ ನೀ, ಮ ಪ ನಿ ಸ̇ ರೀ̇

ರಿ̇ ಮ̇ ಪ̇ ಮ̇ ರೇ̇ ಸ̇ಾ, ಸ̇ ನಿ ರಿ̇ ಸ̇, ನಿ ಪ ಸ ನಿ, ಪ ಮ ರೀ, ರೀ ಮ ರೀ ಮ ಸ ರೀ ಸಾ.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ **ರಾಮಕಥಾಸುಧಾರಸ,** ಶ್ಯಾಮಾಶಾಸ್ತ್ರಿಗಳ **ಪಾಲಿಂಚು ಕಾಮಾಕ್ಷಿ** ಎಂಬ ಕೃತಿಗಳು.

## 16. ಆರಭಿ

**ಆರೋಹಣ** : ಸ ರಿ ಮ ಪ ದ ಸ̇.

**ಅವರೋಹಣ** : ಸ̇ ನಿ ದ ಪ ಮ ಗ ರಿ ಸ.

29ನೇ ಮೇಳಕರ್ತ ಧೀರ ಶಂಕರಾಭರಣ ರಾಗದ ಜನ್ಯ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಚತುಶ್ರುತಿ ರಿಷಭ, ಶುದ್ಧ ಮಧ್ಯಮ, ಪಂಚಮ, ಚತುಶ್ರುತಿ ಧೈವತ. ಅವರೋಹಣದಲ್ಲಿ ಕಾಕಲಿ ನಿಷಾದ ಮತ್ತು

ಅಂತರಗಾಂಧಾರ ಸೇರಿ ಸಂಪೂರ್ಣವಾಗಿ ಬರುತ್ತದೆ. ರಿಷಭ, ಮಧ್ಯಮ, ಧೈವತಗಳು ರಾಗದ ಜೀವಸ್ವರಗಳು. ರಿಷಭ ಮತ್ತು ಧೈವತಗಳಿಗೆ ಕಂಪಿತ ಗಮಕ ಬರುತ್ತದೆ. ಸರ್ವಕಾಲಿಕರಾಗ. ಉಪಾಂಗ ರಾಗ. ಆರೋಹಣದಲ್ಲಿ ಗಾಂಧಾರ ಮತ್ತು ನಿಷಾದಗಳು ವರ್ಜ್ಯ. ಘನರಾಗಗಳಲ್ಲಿ 3ನೇ ರಾಗ. ಔಡವ-ಸಂಪೂರ್ಣರಾಗ. ಜಂಟೀಸ್ವರಗಳು ರಾಗರಂಜನೆ ಕೊಡುತ್ತದೆ. ತ್ರಿಸ್ಥಾಯಿ ರಾಗ.

**ಸಂಚಾರ :**

ದ ದ ಸ ಸ ರಿ ರಿ, ರಿ ಪ ಮಾ ಗ ರಿ, ದ ಸ ರಿ ಸ ರೀ,

ಮ ಪ ದ ಪ ದಾ, ದ ಸ ರಿ ಸ ರೀ ಸ ರಿ ಮಾ ಗ ರಿ,

ರಿ ಪ ಮಾ ಗ ರಿ, ಸ ರಿ ದ ಸ ಪ ದ ಮ ಪ, ಮ ಗ ರೀ,

ರಿ ಮಾ ಗ ರಿ, ಸ ರೀ ರಿ, ಸ ಸಾ, ಸ ನಿ ದ ದಾ ಪಾ, ಮ ಗ ರೀ ಸಾ.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ - **ಸಾಧಿಂಚನೆ,** ಸ್ವಾತಿ ತಿರುನಾಳ್‌ರವರ **ಪಾಹಿಪರ್ವತ ನಂದಿನಿ** ಎಂಬ ಕೃತಿಗಳು.

## 17. ಸಾವೇರಿ

**ಆರೋಹಣ** : ಸ ರಿ ಮ ಪ ದ ಸ.

**ಅವರೋಹಣ** : ಸ ನಿ ದ ಪ ಮ ಗ ರಿ ಸ.

15ನೇ ಮೇಳಕರ್ತ ಮಾಯಾಮಾಳವ ಗೌಳ ರಾಗದ ಜನ್ಯ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಶುದ್ಧ ರಿಷಭ, ಶುದ್ಧ ಮಧ್ಯಮ, ಪಂಚಮ, ಶುದ್ಧ ಧೈವತ. ಕಾಕಲಿ ನಿಷಾದ ಮತ್ತು ಅಂತರಗಾಂಧಾರ ಸೇರಿ ಅವರೋಹಣ ಸಂಪೂರ್ಣ. ಉಪಾಂಗರಾಗ, ರಕ್ತಿರಾಗ, ರಿಷಭ, ಮಧ್ಯಮ ಧೈವತಗಳು ರಾಗದ ಜೀವಸ್ವರಗಳು ಮತ್ತು ನ್ಯಾಸ ಸ್ವರಗಳು. ಪಂಚಮ- ಅಂಶಸ್ವರ. ಕರುಣಾರಸ ಪ್ರಧಾನ ರಾಗ. ಪ್ರಾತಃ ಕಾಲೀಕ ರಾಗ. ರಚನೆಗಳು ರಿಷಭ ಗಾಂಧಾರ, ಮಧ್ಯಮ ಷಡ್ಜ ಪಂಚಮ ಸ್ವರಗಳಿಂದ ಪ್ರಾರಂಭವಾಗುತ್ತವೆ. ಔಡವ-ಸಂಪೂರ್ಣರಾಗ. ವರ್ಜ್ಯರಾಗ, ಆರೋಹಣದಲ್ಲಿ ಗಾಂಧಾರ ನಿಷಾದಗಳು ಬರುವುದಿಲ್ಲ. ತ್ರಿಸ್ಥಾಯಿ ರಾಗ.

**ಸಂಚಾರ :**

ಮ ಪ ದಾ ದ ಪ ಪ ಮ ಗಾ ರಿ, ಸ ರಿ ಮ ಪ ದ ಪಾ

ಪದ ಸ ರಿ ಗಾ ರಿ, ಸ ರಿ ಪ ಮ ಗಾ ರಿ

ಸ ರಿ ಸ ನಿ ದಾ, ದ ಮ ದ ಸಾ ಸ, ಸಾ ರೀ ಸ ನಿ ದಾ ದ ಪ ಮ

ಗಾ ರಿ, ಸ ರಿ ಗ ಸ ರೀ, ಸ ನಿ ದಾ ದ ಪ ಮ ದ ಸಾ ದ ಗ ರಿ ಸಾೀ

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ - **ರಾಮಬಾಣ,** ಮತ್ತು ಶ್ಯಾಮಾಶಾಸ್ತ್ರಿಗಳ **ಶಂಕರಿ ಶಂಕುರು** ಎಂಬ ಕೃತಿಗಳು.

## 18. ಧನ್ಯಾಸಿ

**ಆರೋಹಣ** : ಸ ಗ ಮ ಪ ನಿ ಸ̇

**ಅವರೋಹಣ** : ಸ̇ ನಿ ದ ಪ ಮ ಗ ರಿ ಸ

8ನೇ ಮೇಳಕರ್ತ ಹನುಮತೋಡಿ ರಾಗದ ಜನ್ಯ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ , ಸಾಧಾರಣ ಗಾಂಧಾರ, ಶುದ್ಧ ಮಧ್ಯಮ, ಪಂಚಮ, ಕೈಶಿಕಿನಿಷಾದ. ಅವರೋಹಣದಲ್ಲಿ ಶುದ್ಧ ಧೈವತ ಮತ್ತು ಶುದ್ಧ ರಿಷಭ ಬರುತ್ತವೆ. ಉಪಾಂಗರಾಗ, ಔಡವ-ಸಂಪೂರ್ಣರಾಗ. ಗಮಕವರಿಕ ರಕ್ತಿ ರಾಗ. ಭಕ್ತಿ, ಕರುಣಾರಸ ಪ್ರಧಾನ ರಾಗ. ಪ್ರಾತಃಕಾಲೀನರಾಗ, ತ್ರಿಸ್ಥಾಯಿರಾಗ, ಮಂಗಳಕರ ರಾಗ.

**ಸಂಚಾರ :**

ಗ ಮ ಪ ನೀ॰, ರಿ̇ ಸ̇ ನಿ ದಾ ಪ, ಮಾ ಪ ದ ಪಾ॰ ದ,

ಪ ಮ ಗಾ, ಮ ಗ ಪ ಮ ದ ಪ ಪ ಮ ಗಾರಿ ಸ, ನಿ ಸ ಗ ಮಾ ಪ,

ಸ̇ ನಿ ರಿ̇ ಸ̇ ನಿ ದಾ ಪ, ಸ̇ ನಿ ಪ ನಿ ಪ ಮ ಗಾ, ಮ̇ ಗ ಪ ಮ ದ ಪ,

ಮ ಗ ದ ಪ ಗಾ ರಿ ಸ, ಸ ನಿ̣ ರಿ ಸ ನಿ̣ ದಾ̣ ಪ̣ ಪ̣ ನಿ̣ ನಿ̣ ಸಾ ಸಾ ॰॰.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ - **ನೀಚಿತ್ತಮು** ಮತ್ತು **ಸಂಗೀತಜ್ಞಾನಮು,** ಮುತ್ತಯ್ಯ ಭಾಗವತರ **ಜಪಾಕುಸುಮಭಾಸುರೇ** ಎಂಬ ಕೃತಿಗಳು.

## 19. ವಸಂತ

**ಆರೋಹಣ** : ಸ ಮ ಗ ಮ ದ ನಿ ಸ̇

**ಅವರೋಹಣ** : ಸ̇ ನಿ ದ ಮ ಗ ರಿ ಸ

17ನೇ ಮೇಳಕರ್ತ ಸೂರ್ಯಕಾಂತ ರಾಗದ ಜನ್ಯ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ , ಶುದ್ಧ ಮಧ್ಯಮ, ಅಂತರ ಗಾಂಧಾರ, ಚತುಶ್ರುತಿ ಧೈವತ, ಕಾಕಲಿ ನಿಷಾದ, ಆರೋಹಣದಲ್ಲಿ ರಿಷಭ ವರ್ಜ್ಯ. ಅವರೋಹಣ ರಿಷಭವನ್ನು ಒಳಗೊಂಡಿರುತ್ತೆ. ವಕ್ರ ಔಡವ - ಷಾಡವ ರಾಗ. ಪಂಚಮ ವರ್ಜ್ಯ. ಉಪಾಂಗ, ಮಧ್ಯಮ, ಧೈವತ ನ್ಯಾಸ ಸ್ವರಗಳು. ಗಮಕವರಿಕ ರಕ್ತಿ ರಾಗ. ಸಗಮ ಪ್ರಯೋಗವಿದೆ. ತ್ರಿಸ್ಥಾಯಿ ರಾಗ. ಸರಿಸ ಎಂಬ ಪ್ರಯೋಗ ವಿಶೇಷ. ಮಂಗಳಕರ ರಾಗ.

**ಸಂಚಾರ :**

ಗ ಮ ದ ನಿ ಸಾ̇ ನಿ ದಾ ಮಾ ಗಾ, ಗ ದ ಮ ಗ ರಿ ಸಾ,

ಮಾ ಗ ಮ ದಾ, ನಿ̇ ಸ ರಿ̇ ಸಾ̇ ನಿ, ದ ನೀ ಸ̇ ಮ̇ ಗಾ̇ ರಿ̇ ಸ̇

ನಿ ದ ಮ ಗ ರಿ ಸಾ, ಗ ಮ ದ ಮ ಗ ರಿ ಸಾ, ಸ ಮ ಗ ಮ ದಾ.

ಮ ಗ ರಿ ಸ ನಿ̣ ದ̣ ಮ̣ ದ̣ ನಿ̣ ರೀ॰ ಸಾ.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ - **ಸೀತಮ್ಮ ಮಾಯಮ್ಮ** , ಮೈಸೂರು ವಾಸುದೇವಾಚಾರ್ಯರ **ದೇವಿರಮೇ,** ಮುತ್ತುಸ್ವಾಮಿ ದೀಕ್ಷಿತರ **ರಾಮಚಂದ್ರಂ** ಎಂಬ ಕೃತಿಗಳು.

**20. ಕಮಾಚ್**

**ಆರೋಹಣ** : ಸ ಮ ಗ ಮ ಪ ದ ನಿ ಸ

**ಅವರೋಹಣ** : ಸ ನಿ ದ ಪ ಮ ಗ ರಿ ಸ

28ನೇ ಮೇಳಕರ್ತ ಹರಿಕಾಂಭೋಜಿ ರಾಗದ ಜನ್ಯ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಶುದ್ಧ ಮಧ್ಯಮ, ಅಂತರ ಗಾಂಧಾರ, ಚತುಶ್ರುತಿ ದೈವತ, ಕೈಶಿಕಿ ನಿಷಾದ. ಆರೋಹಣದಲ್ಲಿ ರಿಷಭ ವರ್ಜ್ಯ. ಏಕಾನ್ಯ ಸ್ವರ ಭಾಷಾಂಗರಾಗ, ಸಂಗೀತ ತ್ರಿಮೂರ್ತಿಗಳ ಕಾಲದಿಂದಲೂ ಉಪಾಂಗವೆಂದೇ ರೂಢಿಯಲ್ಲಿದ್ದ ಈ ರಾಗ ಕಾಕಲಿ ನಿಷಾದ ಪ್ರಯೋಗ ಸೇರಿ ಭಾಷಾಂಗ ರಾಗವೆಂದು ಈಗ ಪರಿಗಣಿತವಾಗಿರುವುದು ಮೈಸೂರು ವಾಸುದೇವಾಚಾರ್ಯರಿಂದ. ಅನ್ಯಸ್ವರವು ಕಾಕಲಿ ನಿಷಾದ. ಮಧ್ಯಮ, ದೈವತ, ನಿಷಾದಗಳು ರಾಗ ಛಾಯಾಸ್ವರಗಳು. ಮಧ್ಯಮ ಮತ್ತು ಪಂಚಮ ನ್ಯಾಸ ಸ್ವರಗಳು. ಸರ್ವಕಾಲಿಕ ರಾಗ ರಚನೆಗಳು ಷಡ್ಜ, ಮಧ್ಯಮ, ಪಂಚಮ ಸ್ವರಗಳಲ್ಲಿ ಪ್ರಾರಂಭವಾಗಿವೆ. ಜಾವಳೀ ರಚನಕಾರರಿಂದ ಕಾಕಲಿ ನಿಷಾದ, ಪ್ರಯೋಗವಾಗಿದೆ. ತ್ರಿಸ್ಥಾಯಿರಾಗ.

**ಸಂಚಾರ :**

ಸ ಮ ಗ ಮ ಪ ದ ನೀ ಸಾ ದ $ನಿ_2$ ಸಾ.

ನಿ ಸ ಮಾ ಗ ರಿ ಸ, ನೀ ರಿ ಸ ನೀ ನಿ ದ ಪ ಮ ಪ ದ ಮಾ ಗ ಮಾ,

ಗ ಮ ಪ ದ ನಿ ಪ ದ, ಸ ನೀ ದ ಪ ಮ ಗ ರಿ ಸಾ.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ - **ಸೀತಾಪತೆ,** ಮೈಸೂರು ವಾಸುದೇವಾಚಾರ್ಯರ **ಬ್ರೋಚೇವಾರೆವರುರಾ,** ಎಂಬ ಕೃತಿಗಳು. ವಾಸುದೇವಾಚಾರ್ಯರ ಕೃತಿಯಲ್ಲಿ ಮಾತ್ರ ಕಾಕಲಿ ನಿಷಾದದ ಪ್ರಯೋಗವಿದೆ.

**21. ವಾಚಸ್ಪತಿ**

**ಆರೋಹಣ** : ಸ ರಿ ಗ ಮ ಪ ದ ನಿ ಸ

**ಅವರೋಹಣ** : ಸ ನಿ ದ ಪ ಮ ಗ ರಿ ಸ

64ನೇ ಮೇಳಕರ್ತ ರಾಗ. 11ನೇ ರುದ್ರ ಚಕ್ರದ 4ನೇ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ , ಚತುಶ್ರುತಿ ರಿಷಭ, ಅಂತರ ಗಾಂಧಾರ. ಪ್ರತಿ ಮಧ್ಯಮ, ಪಂಚಮ, ಚತುಶ್ರುತಿ ಧೈವತ, ಕೈಶಿಕಿನಿಷಾದ. ಸರ್ವಕಾಲಿಕರಾಗ, ರಕ್ತಿರಾಗ, ಸರ್ವಸ್ವರ ಗಮಕವರಿಕರಾಗ, ತ್ರಿಸ್ಥಾಯಿರಾಗ.

**ಸಂಚಾರ :**

ನೀ ದ ಪಾ,, ಪ ಮ ದ ಪ ಮ ಗಾ ರೀ,

ಗ ಮ ಪ ದ ನೀ ದಾ, ಪಾ ದ ನಿದಾ ನಿ ದ ಪ ಮ, ಪಾ ದ ನಿದ ನೀ ದ ಪ ಮ,

ದ ನಿ ಸ̇ಾ ರ̇ಿ ಸ̇ ನಿ ದ ಪ ಮ ದ ನಿ ಸ̇ ರ̇ಿ ಗ̇ಾ ರ̇ಿ ಗ̇ ರ̇ಿ ಸ̇, ನೀ ದ ಪ ಮ,

ಪ ಮ ದ ಪ ಮ ಗ ರಿ ರೀ, ರೀ ಗ ರೀ ಗ ಸಾ, ದ ನೀ ದ ಪ ಮ,

ಪ ಪ ದ ದ ನಿ ನಿ ಸ̇ಾ, ದ ನಿ ಸ̇ ರ̇ಿ ಗ̇ ರ̇ಿ ಸ̇ಾ.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ - **ಕಂಟಜೂಡುಮಿ,** ಮುತ್ತಯ್ಯ ಭಾಗವತರ **ಸಹಸ್ರ ಕರ ಮಂಡಿತೇ,** ಸ್ವಾತಿ ತಿರುನಾಳ್‌ರವರ **ಪಾಹಿ ಜಗಜ್ಜನನಿ** ಎಂಬ ಕೃತಿಗಳು.

## 22. ಕೇದಾರಗೌಳ

**ಆರೋಹಣ** : ಸ ರಿ ಮ ಪ ನಿ ಸ̇

**ಅವರೋಹಣ** : ಸ̇ ನಿ ದ ಪ ಮ ಗ ರಿ ಸ

28ನೇ ಮೇಳಕರ್ತ ಹರಿಕಾಂಭೋಜಿ ರಾಗದ ಜನ್ಯ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಚತುಶ್ರುತಿ ರಿಷಭ, ಶುದ್ಧ ಮಧ್ಯಮ, ಪಂಚಮ, ಕೈಶಿಕಿ ನಿಷಾದ. ಅವರೋಹಣದಲ್ಲಿ ಚತುಶ್ರುತಿ ಧೈವತ ಮತ್ತು ಅಂತರ ಗಾಂಧಾರ. ಉಪಾಂಗ ರಾಗ. ಆರೋಹಣದಲ್ಲಿ ಗಾಂಧಾರ ಮತ್ತು ಧೈವತಗಳು ವರ್ಜ್ಯ. ಅವರೋಹಣ ಸಂಪೂರ್ಣವಾಗಿರುತ್ತದೆ. ಚತುಶ್ರುತಿ ರಿಷಭ, ಕೈಶಿಕಿ ನಿಷಾದಗಳು ರಾಗ ಛಾಯಾಸ್ವರಗಳು. ಷಡ್ಜ, ರಿಷಭ, ಪಂಚಮ ಸ್ವರಗಳು ನ್ಯಾಸ ಸ್ವರಗಳು, ತ್ರಿಸ್ಥಾಯಿರಾಗ. ಔಡವ ಸಂಪೂರ್ಣ ರಾಗ. ಗಮಕವರಿಕ, ರಕ್ತಿರಾಗ.

**ಸಂಚಾರ :**

ರೀ ಪ ಮ ಗಾ, ಮ ಗ ರೀ ಸಾ, ನ̣ಿ ಸ ರೀ ಸ ನ̣ಿ ದ̣ ಪ̣ಾ,

ಮ̣ ಪ̣ ನ̣ಿ ಸ, ರಿ ಗಾ ರಿ ರೀ, ರೀ ಮ ಗ ರೀ, ಮ ಗ ರೀ ಸಾ,

ಸ ನ̣ಿ ಸ ರೀ ಸ, ನ̣ಿ ದ̣ ಪ̣ಾ ಪ̣ಾ, ಪಾ ಸಾ ಸ̇ ಸ̇ ನಿ ದ ಪಾ,

ಪ ಪ ಮ ಗಾ, ಗಾ ಮಾ ರೀ ಸಾ, ಸ ನಿ ರಿ ಸ ನ̣ಿ ದ̣ ಪ̣ಾ, ನ̣ಿ ನ̣ಿ ಸಾ.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ - **ವೇಣುಗಾನಲೋಲುನಿ, ತುಳಸೀ ಬಿಲ್ವ,** ನೀಲಕಂಠಂ - ಮುತ್ತುಸ್ವಾಮಿ ದೀಕ್ಷಿತರ ಕೃತಿ, ರಾಮನಾಡು ಶ್ರೀನಿವಾಸಯ್ಯಂಗಾರ್ಯರ **ಸರಗುನಪಾಲಿಂಪ** ಎಂಬ ಕೃತಿಗಳು.

### 23. ಧೇನುಕ

**ಆರೋಹಣ** : ಸ ರಿ ಗ ಮ ಪ ದ ನಿ ಸ̇

**ಅವರೋಹಣ** : ಸ̇ ನಿ ದ ಪ ಮ ಗ ರಿ ಸ

9-ನೇ ಮೇಳಕರ್ತ ರಾಗ. 2ನೇ ನೇತ್ರ ಚಕ್ರದ 3ನೇ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಶುದ್ಧ ರಿಷಭ, ಸಾಧಾರಣ ಗಾಂಧಾರ, ಶುದ್ಧ ಮಧ್ಯಮ, ಪಂಚಮ, ಶುದ್ಧ ಧೈವತ, ಕಾಕಲಿ ನಿಷಾದ. ಗಾಂಧಾರ, ಮಧ್ಯಮ, ಧೈವತ ಸ್ವರಗಳು ರಾಗಛಾಯಾಸ್ವರಗಳು, ಮಧ್ಯಮ, ಪಂಚಮ ಅಂಶಸ್ವರಗಳು, ಮಧ್ಯಮ, ಪಂಚಮ ನಿಷಾದ ನ್ಯಾಸ ಸ್ವರಗಳು. ಸರ್ವಸ್ವರ ಗಮಕ ವರಿಕ ರಕ್ತಿರಾಗ. ತ್ರಿಸ್ಥಾಯಿ ರಾಗ. ಸರ್ವಕಾಲಿಕರಾಗ.

**ಸಂಚಾರ :**

ದ ಪ ಪ ಮ ಗಾ ರಿ ರೀ ಸಾ, ನಿ̣ ಸ ರಿ ಗ ಮಾ,

ದ ಪ ಮ ಗಾ, ಗ ಮ ಪ ದ ನೀ ದ ಪ ದ ನೀ,

ದ ಪ ಮ ಗಾ, ಗ ಮ ಪ ದ ನಿ ಸ̇ ರಿ̇ ಗಾ̇, ಗ̇ ಮ̇ ಪ̇ ಮ̇,

ಗಾ̇ ರಿ̇ ರೀ̇ ಸಾ̇, ನಿ ರಿ̇ ಸ̇ ನಿ ದ ಪ ಮ ಗಾ, ದ ಪ ಪ ಮ,

ಗಾ ರಿ ರೀ ಸಾ, ನಿ ದ̣ ಪ̣ ದ̣ ನಿ̣ ಸಾ.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ - **ತೆಲಿಯಲೇರು ರಾಮ** ಎಂಬ ಕೃತಿ.

### 24. ಸರಸ್ವತಿ

**ಆರೋಹಣ** : ಸ ರಿ ಮ ಪ ದ ಸ̇

**ಅವರೋಹಣ** : ಸ̇ ನಿ ದ ಪ ಮ ರಿ ಸ

64ನೇ ಮೇಳಕರ್ತ ವಾಚಸ್ಪತಿ ರಾಗದಲ್ಲಿ ಜನ್ಯ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಚತುಶ್ರುತಿ ರಿಷಭ, ಪ್ರತಿ ಮಧ್ಯಮ, ಪಂಚಮ, ಚತುಶ್ರುತಿ ಧೈವತ, ಅವರೋಹಣದಲ್ಲಿ ಕೈಶಿಕಿ ನಿಷಾದ. ಆರೋಹಣದಲ್ಲಿ ಗಾಂಧಾರ, ನಿಷಾದಗಳು ವರ್ಜ್ಯ. ಅವರೋಹಣದಲ್ಲಿ ಗಾಂಧಾರ ವರ್ಜ್ಯ. ಔಡವ-ಷಾಡವ ರಾಗ. ಉಪಾಂಗ ರಾಗ.

**ಸಂಚಾರ :**

ಮ ಪ ದ ಸ̇ ರೀ̇, ಸ̇ ನೀ ದ ಪಾ, ಪ ಮ ದ ಪ ಮ ರಿ,

ಸ ನಿ̣ ದ̣ ಸ, ರಿ ಮಾ, ಪ ದಾ ಪ, ಮಾ ಪ ದ , ಪಾೕ ದ, ಪ ಮ ರೀ,

ರೀ ಮ ಪಾ ೕ ಮ ರೀ, ರೀ ಪ ಮ ರೀ, ಸಾ ಸ ನಿ̣ ನಿ̣ ದ̣ ಸಾ.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ - **ಅನುರಾಗಮುಲೇ,** ಮುತ್ತಯ್ಯ ಭಾಗವತರ **ವಾಗೀಶ್ವರಿ ವಾಣಿ ಸರಸ್ವತೀ** ಎಂಬ ಕೃತಿಗಳು.

### 25. ಷಣ್ಮುಖಪ್ರಿಯ

**ಆರೋಹಣ** : ಸ ರಿ ಗ ಮ ಪ ದ ನಿ ಸ̇

**ಅವರೋಹಣ** : ಸ̇ ನಿ ದ ಪ ಮ ಗ ರಿ ಸ

56ನೇ ಮೇಳಕರ್ತ ರಾಗ. 10ನೇ ದಿಶಿ ಚಕ್ರದ 2ನೇ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಚತುಶ್ರುತಿ ರಿಷಭ, ಸಾಧಾರಣ ಗಾಂಧಾರ, ಪ್ರತಿ ಮಧ್ಯಮ, ಪಂಚಮ, ಶುದ್ಧ ಧೈವತ, ಕೈಶಿಕಿ ನಿಷಾದ. ಗಾಂಧಾರ ನಿಷಾದಗಳು ವಾದಿ ಸಂವಾದಿ ಸ್ವರಗಳು. ರಿಷಭ, ಪಂಚಮ, ನಿಷಾದ ಸ್ವರಗಳು ನ್ಯಾಸ ಸ್ವರಗಳು. ಸರ್ವಸ್ವರ ಗಮಕ ವರಿಕ ರಾಗ. ತ್ರಿಸ್ಥಾಯಿಗಳಲ್ಲೂ ಸಂಚಾರವಿರುವ ಸರ್ವಕಾಲಿಕ ರಾಗ, ರಚನೆಗಳು ಪಂಚಮ, ನಿಷಾದ ಸ್ವರಗಳಿಂದ ಪ್ರಾರಂಭವಾಗಿದೆ. ರಿಷಭ, ಗಾಂಧಾರ, ಮಧ್ಯಮ, ನಿಷಾದಗಳು ರಾಗ ಛಾಯಾ ಸ್ವರಗಳು. ಅಸಂಪೂರ್ಣ ಮೇಳ ಪದ್ಧತಿಯಲ್ಲಿ ಚಾಮರ ಎಂದು ಉಲ್ಲೇಖವಾಗಿದೆ. ಕರುಣಾರಸ ಪ್ರಧಾನ ರಾಗ.

**ಸಂಚಾರ :**

ಪ ಮ ಪ ದ ಪಾ ದ, ಪ ಮ ಗಾ ರೀ, ಗ ರಿ ಗ ಮ,

ಪ ದಾ ಪ, ಪಾ ದ ನೀ ದ ಪ ಮ, ಪ ಪ ದಾ ದ, ಪ ಮ ಗಾ ರೀ,

ಗ ಮ ಪ ದ ನೀ ದ, ದ ನಿ ಸ̇ ರಿ̇ ಗಾ̇ ರಿ̇ ಸಾ̇, ಗ ಮ ಪ ಮ, ಗಾ ರೀ ಸಾ.

ನಿ ಸ̇ ರೀ̇ ಸ̇ ದಾ ಪ, ಪ ಮ ದ ಪ ಮ ಗಾ ರೀ, ಗ ರಿ ಸ ನ̣ಿ ಸಾ, ಧ̣ ನ̣ೀ ಸಾ ೞೞ.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ - **ವದ್ದನವಾರುಲೇರು,** ಪಟ್ಣಂ ಸುಬ್ರಹ್ಮಣ್ಯ ಅಯ್ಯರ್‌ರವರ **ಮರಿ ವೇರೆ ದಿಕ್ಕೆವರಯ್ಯ ರಾಮ** ಎಂಬ ಕೃತಿಗಳು.

### 26. ತೋಡಿ

**ಆರೋಹಣ** : ಸ ರಿ ಗ ಮ ಪ ದ ನಿ ಸ̇

**ಅವರೋಹಣ** : ಸ̇ ನಿ ದ ಪ ಮ ಗ ರಿ ಸ

8ನೇ ಮೇಳಕರ್ತ ರಾಗ. 2ನೇ ನೇತ್ರ ಚಕ್ರದ 2ನೇ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಶುದ್ಧ ರಿಷಭ, ಸಾಧಾರಣ ಗಾಂಧಾರ, ಶುದ್ಧ ಮಧ್ಯಮ, ಪಂಚಮ, ಶುದ್ಧ ಧೈವತ, ಕೈಶಿಕಿ ನಿಷಾದ. ಗಾಂಧಾರ, ಮಧ್ಯಮ, ಧೈವತಗಳು, ರಾಗ ಛಾಯಾ ಸ್ವರಗಳು. ಪಂಚಮ, ಅಂಶಸ್ವರ, ಸರ್ವ ಸ್ವರಗಮಕವರಿಕ ರಕ್ತಿರಾಗ, ತ್ರಿಸ್ಥಾಯಿರಾಗ, ಸರ್ವಕಾಲಿಕರಾಗ, ರಚನೆಗಳು ಷಡ್ಜ , ಗಾಂಧಾರ, ಮಧ್ಯಮ, ಪಂಚಮ, ನಿಷಾದ ಸ್ವರಗಳಿಂದ ಪ್ರಾರಂಭವಾಗಿದೆ. ಷಡ್ಜ, ಪಂಚಮಗಳನ್ನು ವರ್ಜಿಸಿ ಸ್ವಲ್ಪ ಸಂಚಾರಗಳನ್ನು ಪ್ರಯೋಗಿಸುವುದು ವಿಶೇಷ. ಮೂರ್ಛನಕಾರಕ ರಾಗ.

**ಸಂಚಾರ :**

ಸ ಸ ರಿ ಗಾ, ಮಾ ಪ ದ ಪ ಮ ಗಾ ರೀ ಸಾ,

ಸಾೕ ರಿ ಗ ಮ ಪಾ ದ ಪ ಮಾ, ಮ ಪಾ ಗ ಮಾ, ಮಾ ಮ ನಿ ಪ ದಾೕ

ಮ ಪ ದ ದ ಪ ಪ ಮ ಗಾ, ಗ ಮ ಪ ದ ನಿ ಸ ರಿ ನಿ ದ ಪ ಮ ಗಾ,

ಗ ಮ ದ ನಿ, ಸಾ ರಿ ಸ ನಿ ದ ಪ ಮ, ದ ನಿ ಸ ರಿ ಗಾ ರಿ ಸ, ಸಾ ಗ ಪ ಮಾ ಗ ರೀ ಸಾ,

ದ ನಿ ಸಾ ರಿ ಸ ನಿ ದ ಪ ಮ ಗಾ, ಮ ಗ ದ ಪ ಪ ಮ, ಗಾ ರಿ ಸಾ,

ಸಾ ನಿ ದ ನೀ ದ, ನೀ ಸಾ ರೀ ಸಾ

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ - **ಕೊಲುವ ಮರೆಗದ,** ಸ್ವಾತೀ ತಿರುನಾಳ್‌ರವರ **ಸರಸಿಜನಾಭಮುರಾರೆ** ಎಂಬ ಕೃತಿಗಳು.

## 27. ಮಲಯ ಮಾರುತ

**ಆರೋಹಣ** : ಸ ರಿ ಗ ಪ ದ ನಿ ಸ

**ಅವರೋಹಣ** : ಸ ನಿ ದ ಪ ಗ ರಿ ಸ

16ನೇ ಮೇಳಕರ್ತ ಚಕ್ರವಾಕರಾಗದಲ್ಲಿ ಜನ್ಯ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಶುದ್ಧ ರಿಷಭ, ಅಂತರ ಗಾಂಧಾರ, ಶುದ್ಧ ಮಧ್ಯಮ, ಪಂಚಮ, ಚತುಶ್ರುತಿ ಧೈವತ, ಕೈಶಿಕಿ ನಿಷಾದ. ಮಧ್ಯಮ ವರ್ಜ್ಯ. ಉಭಯ ಷಾಡವ ರಾಗ. ಗಾಂಧಾರ, ನಿಷಾದ ರಾಗ ಛಾಯಾ ಸ್ವರಗಳು. ಪ್ರಾತಃಕಾಲಿಕ ರಾಗ.

**ಸಂಚಾರ :**

ಗ ಪ ದ ನೀ ದ ಪ ಗಾ, ಪ ಗ ದ ಪ ಗ ರೀ ಸಾ,

ಸ ನಿ ರಿ ಸ ನಿ ಧ ನೀ, ಸ ರೀ ಗ ಗಾ ಪಾ, ಗ ಪ ದ ನೀ ನಿ ದ ದಾ ಪಾ,

ಗ ಪ ದ ನಿ ಸ ರೀ ಸಾ, ಸ ರಿ ಗ ಪ ಗಾ, ಗ ರೀ ಸ,

ಸ ನಿ ರಿ ಸ ನಿ ದ ಪ ಗ, ಪ ಗ ದ ಪ ಗ ರೀ ಸಾ, ಸ ನಿ ಧ ನಿ ಪ ದಾ ನಿ ಸಾ.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ - **ಮನಸಾಎಟುಲೋರ್ತುನೆ,** ಪಟ್ಣಂ ಸುಬ್ರಹ್ಮಣ್ಯ ಅಯ್ಯರ್‌ರವರ **ಧನ್ಯುಡೆವ್ವಡೋ ದಾಶರಥೇ** ಎಂಬ ಕೃತಿಗಳು.

## 28. ಶ್ರೀರಾಗ

**ಆರೋಹಣ** : ಸ ರಿ ಮ ಪ ನಿ ಸ

**ಅವರೋಹಣ** : ಸ ನಿ ಪ ದ ನಿ ಪ ಮ ರಿ ಗ ರಿ ಸ

22ನೇ ಮೇಳಕರ್ತ ಖರಹರಪ್ರಿಯರಾಗದ ಜನ್ಯ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಚತುಶ್ರುತಿ ರಿಷಭ, ಶುದ್ಧ ಮಧ್ಯಮ, ಪಂಚಮ, ಕೈಶಿಕಿ ನಿಷಾದ. ಅವರೋಹಣದಲ್ಲಿ ಸಾಧಾರಣ ಗಾಂಧಾರ, ಚತುಶ್ರುತಿ ಧೈವತ ಸ್ವರಗಳು ಬರುತ್ತವೆ. ಔಡವ-ವಕ್ರ ಸಂಪೂರ್ಣ ರಾಗ. ಈ ರಾಗವು ಘನರಾಗ. ಪೂರ್ವ ಪಂಚಕದ 5ನೇ ರಾಗ. ಆರೋಹಣದಲ್ಲಿ ಚತುಶ್ರುತಿ ರಿಷಭ, ಅವರೋಹಣದಲ್ಲಿ ಗಾಂಧಾರ, ಜೀವಸ್ವರಗಳು. ರಿಷಭ ಅಂಶಸ್ವರ,

ಸರ್ವಕಾಲಿಕ, ಮಂಗಳಕರ ರಾಗ. ಧೈವತ ಪ್ರಯೋಗ ಮುತ್ತುಸ್ವಾಮಿ ದೀಕ್ಷಿತರ ರಚನೆಗಳಲ್ಲಿ ಮೂಡಿರುವ ವಿಶೇಷ. ತ್ಯಾಗರಾಜರು **ಸ ರಿ ಮ ಪ ನಿ ಸ, ಸ ನಿ ಪ ಮ ರಿ ಗ ರಿ ಸ** - ಎಂಬಂತೆ ಆರೋಹ ಅವರೋಹವನ್ನನುಸರಿಸಿದ್ದಾರೆ.

**ಸಂಚಾರ :**

ರಿ ಮ ಪ ನಿ ಸ ರೀ ಸಾ, ಸ ನಿರಿ ಸ ನಿ ಪ ನೀ,

ನೀ ಸ ರಿ, ಸಾ ರಿ ಸ ನಿಪಾ, ಪ ನಿ ಸ ರಿ, ಸ ರಿ ಗಾ ರೀ ಸಾ ರೀ ಪ ಮ,

ರೀ ಸ ರಿ ಗಾ ರೀ, ಗಾ ರಿ ರೀ ಸಾ ಸ ನಿ ರಿ ಸ, ನಿ ಪ ನಿ ನಿ ಸ ಸಾ.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ - **ಎಂದರೋಮಹಾನುಬಾವುಲು,** ಮುತ್ತುಸ್ವಾಮಿ ದೀಕ್ಷಿತರ **ಶ್ರೀ ವರಲಕ್ಷ್ಮಿ** ಎಂಬ ಕೃತಿಗಳು.

## 29. ಕೀರವಾಣಿ

**ಆರೋಹಣ** : ಸ ರಿ ಗ ಮ ಪ ದ ನಿ ಸ

**ಅವರೋಹಣ** : ಸ ನಿ ದ ಪ ಮ ಗ ರಿ ಸ

21ನೇ ಮೇಳಕರ್ತ ರಾಗ. 4ನೇ ವೇದ ಚಕ್ರದ 3ನೇ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಚತುಶ್ರುತಿ ರಿಷಭ, ಸಾಧಾರಣ ಗಾಂಧಾರ, ಶುದ್ಧ ಮಧ್ಯಮ, ಪಂಚಮ, ಶುದ್ಧ ಧೈವತ, ಕಾಕಲಿ ನಿಷಾದ. ಸರ್ವಕಾಲಿಕ ರಾಗ. ರಿಷಭ, ಪಂಚಮಗಳು, ನಿಷಾದಗಳು, ರಾಗಛಾಯಾಸ್ವರಗಳು. ಸರ್ವಗಮಕವರಿಕ ರಕ್ತಿರಾಗ. ತ್ರಿಸ್ಥಾಯಿ ರಾಗ.

**ಸಂಚಾರ :**

ಗ ಮ ಪ ದ ನೀ ದ ಪ ಮ ಗಾ ರಿ, ಗ ರಿ ರಿ ಸ ಸಾ ರೀ,

ಗ ಮಾ ಪಾ ದ ನೀ, ಸಾ ರಿ ಗಾ, ಗ ರಿ ರೀ ಸಾ, ಸ ನಿ ರಿ ಸ ನಿ ದಾ ಪಾ,

ಮಾ ಪ ಮ ಮಾ ಗ, ಗಾ ಗ ರಿ ರೀ, ಗ ರಿ ಸ ನಿ ನಿ ದ ಪ ದ ನಿ ಸಾ,

ದ ನಿ ರಿ ನಿ ದ ಮಾ, ಪ ದ ಪ ಗಾ ರಿ.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ - **ಕಲಿಗಿಯುಂಟೇಗದಾ,** ಪಟ್ಣಂ ಸುಬ್ರಹ್ಮಣ್ಯ ಅಯ್ಯರ್‌ರವರ **ವರವುಲೊಸಗಿ** ಎಂಬ ಕೃತಿಗಳು.

## 30. ನಾಟ

**ಆರೋಹಣ** : ಸ ರಿ ಗ ಮ ಪ ದ ನಿ ಸ

**ಅವರೋಹಣ** : ಸ ನಿ ಪ ಮ ರಿ ಸ

36ನೇ ಮೇಳಕರ್ತ ಚಲನಾಟ ರಾಗದ ಜನ್ಯ ರಾಗ. ಈ ರಾಗಕ್ಕೆ ಬರುವ ಸ್ವರಗಳು ಷಡ್ಜ, ಷಟ್‌ಶ್ರುತಿ ರಿಷಭ, ಅಂತರ ಗಾಂಧಾರ, ಶುದ್ಧ ಮಧ್ಯಮ, ಪಂಚಮ, ಷಟ್‌ಶ್ರುತಿ ಧೈವತ, ಕಾಕಲಿ ನಿಷಾದ, ಸಂಪೂರ್ಣ ಔಡವ ರಾಗ.

ಉಪಾಂಗ ರಾಗ. ರಿಷಭ, ಮಧ್ಯಮ, ನಿಷಾದಗಳು ಜೀವಸ್ವರಗಳು. ರಿಷಭ ಪಂಚಮಗಳು ನ್ಯಾಸ ಸ್ವರಗಳು. ಸರ್ವಕಾಲಿಕ ರಾಗ. ವೀರರಸಪ್ರಧಾನ ರಾಗ. ಘನರಾಗ. ಪೂರ್ವ ಪಂಚಕದ 1ನೇ ರಾಗ. ತ್ರಿಸ್ಥಾಯಿ ರಾಗ.

ರಚನೆಗಳು ಷಡ್ಜ, ಗಾಂಧಾರ, ಮಧ್ಯಮ ಪಂಚಮ ಸ್ವರಗಳಲ್ಲಿ ಪ್ರಾರಂಭವಾಗಿವೆ.

**ಸಂಚಾರ :**

ಗ ಮಪ ದ ನಿ̇ಸ̇ ರೀ̇ ಗ ಮ ರೀ ಸ ರಿ ಸ ನಿ, ಪ ಮ ರೀ,

ಪ ಮ ಗ ಮ, ಗ ಮಾ ಮಾ ರಿ, ಸ ನಿ ಸ ರಿ, ಸ ನ಼ಿ ಪ಼ಾ ಮ಼ಾ ಗಾ ಮಾ,

ರಿ ಗ ಮಾ ರೀ ಸಾ, ಪ ಮ ಪ ನೀ ಪ, ಸಾ̇ ನಿ ರೀ̇ ಸಾ̇.

**ಪ್ರಸಿದ್ಧ ರಚನೆಗಳು :**

ತ್ಯಾಗರಾಜರ - **ಪಂಚರತ್ನ ಕೃತಿ,** ಜಗದಾನಂದಕಾರಕ, ತ್ಯಾಗರಾಜರ **ನಿನ್ನೇ ಭಜನ,** ಪುರಂದರದಾಸರ **ಜಯ ಜಯ ಜಯ,** ಮುತ್ತುಸ್ವಾಮಿ ದೀಕ್ಷಿತರ **ಪವನಾತ್ಮಜಾಗಚ್ಛ, ನಿನ್ನೇ ಭಜನ** ಮುಂತಾದ ಕೃತಿಗಳು.



## ಅಧ್ಯಾಯ - 9

## ತಾಳಗಳ ರಚನಾಕ್ರಮ

ಭಾರತೀಯ ಶಾಸ್ತ್ರೀಯ ಸಂಗೀತಕ್ಕೆ ಅವಶ್ಯಕವಾಗಿ ಬೇಕಿರುವ ಸಾಮಗ್ರಿಗಳಲ್ಲಿ ತಾಳವೂ ಒಂದು. ತಾಳವೆಂಬ ಪದದಲ್ಲಿ **ತಾ** ಎಂಬುದು ಶಂಕರ ಸ್ವರೂಪವೂ, **ಳ** ಎಂಬುದು ಪಾರ್ವತಿ ಸ್ವರೂಪವೂ ಆಗಿ ಈ ಎರಡು ಸ್ವರೂಪದ ಸಂಯೋಗದಿಂದಲೇ ತಾಳವು ಉಂಟಾಯಿತು ಎಂದು ಶಾಸ್ತ್ರವು ಹೇಳುತ್ತದೆ. **ಗೀತಂ ವಾದ್ಯಂ ಚ ನೃತ್ಯಂ ಚ ತಾಳ ಹೀನಂ ನರಂಜತೇ** ಎಂಬಂತೆ ಗಾಯನ, ವಾದ್ಯ ಮತ್ತು ನೃತ್ಯಕ್ಕೆ ತಾಳವೇ ಪ್ರಧಾನವಾದ ಅಂಗವಾಗಿದೆ.

**ಶ್ರುತಿ ರ್ಮಾತಾ ಲಯಃ ಪಿತಾ** ಎಂಬ ಉಕ್ತಿಯಂತೆ, ಸಂಗೀತಕ್ಕೆ ಶ್ರುತಿ ತಾಯಿಯಾದರೆ, ಲಯ ಪ್ರಧಾನವಾದ ತಾಳವೇ ತಂದೆಯ ಸ್ವರೂಪ. ಗಾಯನದ ಕಾಲ ಪ್ರಮಾಣವನ್ನು ಅಳೆಯುವ ರಾಗ, ಭಾವಗಳ ಶೋಭೆ ಮತ್ತು ಸಂಪೂರ್ಣತೆಯನ್ನು ಒದಗಿಸುವ ಸಾಧನವೇ ತಾಳ.

### ತಾಳ ವಿಭಜನೆ :

ರಾಗದಂತೆಯೇ ತಾಳವು ಪ್ರಮುಖವಾಗಿ ಮಾರ್ಗ ಮತ್ತು ದೇಶಿ ಎಂದು ವಿಭಜಿಸಲ್ಪಟ್ಟಿದೆ. ಮಾರ್ಗ ತಾಳಗಳು ಈಶ್ವರ ಪ್ರಣೀತವೆಂದು ಪ್ರತೀತಿ. ಇತರ ತಾಳಗಳಿಗೆ ದೇಶಿ ತಾಳಗಳೆಂದು ಹೆಸರು.

ಈ ದೇಶೀತಾಳಗಳು ಪ್ರಧಾನವಾಗಿ ಏಳು ವಿಧ; ಧ್ರುವ, ಮಠ್ಯ, ರೂಪಕ, ಝಂಪೆ, ತ್ರಿಪುಟ, ಅಟ್ಟ ಮತ್ತು ಏಕತಾಳಗಳು. ಸಪ್ತ ಸ್ವರಗಳಂತೆ ಸಪ್ತತಾಳಗಳಿವೆ. ಈ ಮೇಲಿನ ಸಪ್ತ ತಾಳಗಳಲ್ಲಿ ಲಘು, ದ್ರುತ ಮತ್ತು ಅನುದ್ರುತ ಅಂಗಗಳನ್ನು ಮಾತ್ರ ಉಪಯೋಗಿಸಲಾಗುತ್ತದೆ. ಪ್ರಾಚೀನ ಪದ್ಧತಿಯಲ್ಲಿ ಇರುವ 108 ಅಥವಾ ಅಷ್ಟೋತ್ತರ ಶತತಾಳಗಳಲ್ಲಿ ಷಡಂಗ ಉಪಯೋಗಿಸಲಾಗುತ್ತದೆ.

ಪುರಂದರದಾಸರು ಈ ಸಪ್ತತಾಳಗಳ ಜಾತಿ ಭೇದಗಳ ಮೂಲಕ ಹುಟ್ಟುವ 35 ತಾಳಗಳನ್ನು ಉಪಯೋಗಿಸಿ, ಅಲಂಕಾರ, ಗೀತೆ, ಕೀರ್ತನೆ ಮತ್ತು ಸೂಳಾದಿ ರಚನೆಗಳನ್ನು ರಚಿಸಿದ್ದರಿಂದ ಇವಕ್ಕೆ ಸೂಳಾದಿ ಸಪ್ತತಾಳಗಳೆಂದು ಹೆಸರು ಬಂದಿತು.

ಈ ಸಪ್ತತಾಳಗಳು ತಿಶ್ರ (3), ಚತುರಶ್ರ (4), ಖಂಡ (5), ಮಿಶ್ರ (7), ಮತ್ತು ಸಂಕೀರ್ಣ (9) ಎಂಬ 5 ಜಾತಿ ಭೇದಗಳಿಂದ 35 ತಾಳಗಳಾಗುತ್ತವೆ. (7 x 5 = 35) ಈ 35 ತಾಳಗಳು ಮತ್ತೆ ತಿಶ್ರ, ಚತುರಶ್ರ, ಖಂಡ, ಮಿಶ್ರ ಮತ್ತು ಸಂಕೀರ್ಣ ಎಂಬ ಪಂಚಗತಿ ಭೇದಗಳನ್ನು ಹೊಂದಿ ಒಟ್ಟು 175 ತಾಳಗಳಾಗುತ್ತವೆ. (35 x 5 = 175).

ಮೇಲಿನ 5 ಜಾತಿಭೇದಗಳು ತಾಳದಲ್ಲಿ ಬರುವ ಲಘುವಿಗೆ ಮಾತ್ರ ಅನ್ವಯಿಸುತ್ತದೆ.

ಈ 35 ತಾಳಗಳ ಸಂಪೂರ್ಣ ರಚನಾಕ್ರಮದ ವಿವರಣೆ ಹೀಗಿದೆ.

| ತಾಳ | ಅಂಗ | ಜಾತಿ | ಅಕ್ಷರ |
|---|---|---|---|
| ಧ್ರುವ | IO!! | ತಿಶ್ರ | 3 + 2 + 3 + 3 = 11 |
| | | ಚತುರಶ್ರ | 4 + 2 + 4 + 4 = 14 |
| | | ಖಂಡ | 5 + 2 + 5 + 5 = 17 |
| | | ಮಿಶ್ರ | 7 + 2 + 7 + 7 = 23 |
| | | ಸಂಕೀರ್ಣ | 9 + 2 + 9 + 9 = 29 |

| ತಾಳ | ಅಂಗ | ಜಾತಿ | ಅಕ್ಷರ |
|---|---|---|---|
| ಮಠ್ಯ | IOI | ತಿಶ್ರ | 3 + 2 + 3 = 08 |
| | | ಚತುರಶ್ರ | 4 + 2 + 4 = 10 |
| | | ಖಂಡ | 5 + 2 + 5 = 12 |
| | | ಮಿಶ್ರ | 7 + 2 + 7 = 16 |
| | | ಸಂಕೀರ್ಣ | 9 + 2 + 9 = 20 |
| ರೂಪಕ | OI | ತಿಶ್ರ | 2 + 3 = 05 |
| | | ಚತುರಶ್ರ | 2 + 4 = 06 |
| | | ಖಂಡ | 2 + 5 = 07 |
| | | ಮಿಶ್ರ | 2 + 7 = 09 |
| | | ಸಂಕೀರ್ಣ | 2 + 9 = 11 |
| ಝಂಪೆ | IUO | ತಿಶ್ರ | 3 1 2 = 06 |
| | | ಚತುರಶ್ರ | 4 1 2 = 07 |
| | | ಖಂಡ | 5 1 2 = 08 |
| | | ಮಿಶ್ರ | 7 1 2 = 10 |
| | | ಸಂಕೀರ್ಣ | 9 1 2 = 12 |
| ತ್ರಿಪುಟ | IOO | ತಿಶ್ರ | 3 2 2 = 07 |
| | | ಚತುರಶ್ರ | 4 2 2 = 08 |
| | | ಖಂಡ | 5 2 2 = 09 |
| | | ಮಿಶ್ರ | 7 2 2 = 11 |
| | | ಸಂಕೀರ್ಣ | 9 2 2 = 13 |
| ಅಟ | IIOO | ತಿಶ್ರ | 3 3 2 2 = 10 |
| | | ಚತುರಶ್ರ | 4 4 2 2 = 12 |
| | | ಖಂಡ | 5 5 2 2 = 14 |
| | | ಮಿಶ್ರ | 7 7 2 2 = 18 |
| | | ಸಂಕೀರ್ಣ | 9 9 2 2 = 22 |
| ಏಕ | I | ತಿಶ್ರ | 3 |
| | | ಚತುರಶ್ರ | 4 |
| | | ಖಂಡ | 5 |
| | | ಮಿಶ್ರ | 7 |
| | | ಸಂಕೀರ್ಣ | 9 |

## ಅಧ್ಯಾಯ - 9 (ಎ)

## ಛಾಪು ತಾಳಗಳು, ಅವುಗಳ ವೈವಿಧ್ಯತೆ

ಪುರಾತನ ತಾಳಗಳಲ್ಲಿ ಒಂದಾದ ಛಾಪುತಾಳವು ಉತ್ತರ ಭಾರತದ ಸಂಗೀತದಲ್ಲಿ ಕಾಣಬರುತ್ತದೆ. ಗ್ರಾಮಾಂತರ ಪ್ರದೇಶಗಳಲ್ಲಿ ಹಾಡುವ ಜನಪದ ಗೀತೆಗಳಲ್ಲಿ ಈ ತಾಳವು ಉಪಯೋಗಿಸಲ್ಪಡುತ್ತದೆ. ಇದರ ಅಂಗ ಅಸಮಾನವಾದ 2 ಪೆಟ್ಟುಗಳು ಅಥವಾ 2 ಘಾತಗಳು. ಸೌಕರ್ಯಕ್ಕೋಸ್ಕರವಾಗಿ ಒಂದು ಬೀಸು, ಎರಡು ಘಾತವಾಗಿ ನಿರೂಪಿಸುವ ಅಭ್ಯಾಸ ವಾಡಿಕೆಯಲ್ಲಿದೆ. ಈ ತಾಳದಲ್ಲಿ ನಾಲ್ಕು ವಿಧಗಳಿವೆ.

1. ತಿಶ್ರ ಛಾಪು ( 1 + 2 = 3) ಮೊದಲನೆಯ ಘಾತಕ್ಕೆ 1 ಅಕ್ಷರವು ಎರಡನೆಯ ಘಾತಕ್ಕೆ 2 ಅಕ್ಷರವು ಬರುತ್ತದೆ.
2. ಖಂಡಛಾಪು ( 2 + 3 = 5) ಇದರಲ್ಲಿ ಮೊದಲನೆಯ ಘಾತಕ್ಕೆ 2 ಅಕ್ಷರ, ಮತ್ತು ಎರಡನೆಯ ಘಾತಕ್ಕೆ 3 ಅಕ್ಷರಗಳು ಬರುತ್ತದೆ. ಇದನ್ನು ಅರಝುಂಪೆ ಎಂದು ಕರೆಯುವ ವಾಡಿಕೆ ಇದೆ.
3. ಮಿಶ್ರಛಾಪು ( 3 + 4 = 7) ಇದರಲ್ಲಿ ಮೊದಲನೆಯ ಘಾತಕ್ಕೆ 3 ಅಕ್ಷರ, ಮುಂದಿನ ಘಾತಕ್ಕೆ ನಾಲ್ಕು ಅಕ್ಷರಗಳು ಬರುತ್ತವೆ. ಇದರಲ್ಲಿ ತ ಕಿಟ - ತ ಕ ಧಿ ಮಿ ( 3 + 4) ಮತ್ತು ತ ಕ ಧಿ ಮಿ - ತ ಕಿ ಟ ( 4 + 3 ) ಎಂಬ 2 ವಿಧಗಳಿವೆ. ಎರಡನೆಯ ವಿಧಕ್ಕೆ ವಿಲೋಮಛಾಪು ಎಂದು ಹೆಸರು.
4. ಸಂಕೀರ್ಣ ಛಾಪು ( 4 + 5 = 9) ಇದರಲ್ಲಿ ಮೊದಲನೆಯ ಘಾತಕ್ಕೆ 4 ಅಕ್ಷರಗಳು ಮತ್ತು ಮುಂದಿನ ಘಾತಕ್ಕೆ 5 ಅಕ್ಷರವೂ ಬರುತ್ತದೆ.

## ಅಧ್ಯಾಯ - 9 (ಬಿ)

## ದೇಶಾದಿ, ಮಧ್ಯಾದಿ ತಾಳಗಳು

### ದೇಶಾದಿ, ಮಧ್ಯಾದಿ ತಾಳಗಳು :

ಹಿಂದೂಸ್ಥಾನಿ ಪದ್ಧತಿಯಲ್ಲಿ ಹೆಚ್ಚಾಗಿ ಕಂಡುಬರುವ ಈ ತಾಳವನ್ನು ಕರ್ನಾಟಕ ಸಂಗೀತದಲ್ಲಿ ಶ್ರೀ ತ್ಯಾಗರಾಜರು ಉಪಯೋಗಿಸಿ ಅನೇಕ ಕೃತಿಗಳನ್ನು ರಚಿಸಿ ಪ್ರಚುರಪಡಿಸಿದ್ದಾರೆ. ಆದಿತಾಳಕ್ಕೂ ದೇಶಾದಿ ತಾಳಕ್ಕೂ ಇರುವ ಅಕ್ಷರ ಕಾಲ ಒಂದೇ ಆದರೂ (8 ಅಕ್ಷರ) ದೇಶಾದಿ ತಾಳದ ಅಂಗ ರಚನೆ ವಿಭಿನ್ನವಾಗಿದೆ. ಅಂದರೆ ಆದಿತಾಳದಂತೆ ಲಘು ಮತ್ತು ದ್ರುತಗಳು ಇರುವುದಿಲ್ಲ. ಒಂದು ವಿಸರ್ಜಿತ ಅಥವಾ ಬೀಸು ಮತ್ತು 3 ಘಾತ ಅಥವಾ ಪೆಟ್ಟುಗಳು ಬರುತ್ತವೆ.

#### ದೇಶಾದಿ

**(ಒಂದು ಬೀಸು + 3 ಘಾತ)**

ಈ ತಾಳದಲ್ಲಿ ಕೀರ್ತನೆಗಳು 3/4 ಅಕ್ಷರವನ್ನು ಬಿಟ್ಟು ವಿಸರ್ಜಿತದಲ್ಲಿ ಆರಂಭವಾಗುತ್ತದೆ. ಕೃತಿಗಳು ಮಧ್ಯಮ ಕಾಲದಲ್ಲಿ ಇರುತ್ತವೆ.

ಉದಾ:- **ಎಂತವೇಡುಕೊಂದು**

ರಘುನಾಯಕ

#### ಮಧ್ಯಾದಿ

**(ಒಂದು ವಿಸರ್ಜಿತ + 3 ಘಾತ)**

ಈ ತಾಳದಲ್ಲಿ ಕೃತಿಗಳು 2 ಅಕ್ಷರವನ್ನು ಬಿಟ್ಟು ವಿಸರ್ಜಿತದಲ್ಲಿ ಆರಂಭವಾಗುತ್ತದೆ. ಕೃತಿಗಳು ವಿಳಂಬ ಕಾಲದಲ್ಲಿ ಇರುತ್ತವೆ.

ಉದಾ:- **ಮೇರುಸಮಾನ**

ರಾಗಸುಧಾರಸ

# ಅಧ್ಯಾಯ - 10

## ಸಂಗೀತ ರಚನೆಗಳು

ಕರ್ನಾಟಕ ಶಾಸ್ತ್ರೀಯ ಸಂಗೀತದಲ್ಲಿ, ರಚನೆಗಳಿಗೆ ವಿಶಿಷ್ಟ ಸ್ಥಾನವನ್ನು ಕೊಡಲಾಗಿದೆ. ಸಂಗೀತ ಕಲೆಯ ಉದ್ಧಾರಕ್ಕಾಗಿಯೇ ರಚಿತವಾಗಿರುವ ಈ ರಚನೆಗಳು, ಸಂಗೀತಶಾಸ್ತ್ರದ ಮುಖ್ಯ ಲಕ್ಷಣಗಳನ್ನು ಒಳಗೊಂಡಿದೆಯಲ್ಲದೆ ವಾಗ್ಗೇಯಕಾರನ ಭಾವನೆಗಳನ್ನು, ಉದ್ದೇಶಗಳನ್ನು ವ್ಯಕ್ತಪಡಿಸುತ್ತವೆ. ಈ ರಚನೆಗಳನ್ನು ಕಲ್ಪಿತ ಸಂಗೀತವೆಂದು ಕರೆಯುತ್ತಾರೆ. ಅಲ್ಲದೆ ಸಂಗೀತ ರಚನೆಗಳು ರಾಗದ ಸಮಗ್ರ ಸ್ವರೂಪವನ್ನು ಕೂಡ ಚಿತ್ರಿಸುತ್ತವೆ. ಈ ಸಂಗೀತ ರಚನೆಗಳಲ್ಲಿ ಅನೇಕ ವಿಧಗಳಿವೆ. ಅವುಗಳಲ್ಲಿ ಗೀತೆ, ಸ್ವರಜತಿ, ತಾನವರ್ಣ, ಕೃತಿ, ಕೀರ್ತನೆ, ಜಾವಳಿ ಮತ್ತು ತಿಲ್ಲಾನಗಳನ್ನು ಇಲ್ಲಿ ಸ್ಥೂಲವಾಗಿ ಪರಿಚಯ ಮಾಡಲಾಗಿದೆ.

### ಗೀತೆ :

ಕರ್ನಾಟಕ ಶಾಸ್ತ್ರೀಯ ಸಂಗೀತದ ಸ್ವರಾವಳಿಗಳ ನಂತರ ಸಾಹಿತ್ಯ ಸಹಿತ ಮೊಟ್ಟ ಮೊದಲ ರಚನೆಯೇ ಗೀತೆ. ಇದನ್ನು ಸಾಹಿತ್ಯದೊಡನೆ ಕೂಡಿರುವ ಕವನವೆಂದು ಅಥವಾ ಪದ್ಯಬಂಧವೆಂದು ಕರೆಯಬಹುದು. ಸುಲಭ ನಡೆಯಲ್ಲಿದ್ದು ಕಿವಿಗೆ ರಂಜನೆಯನ್ನು ಉಂಟುಮಾಡುವ ರಚನೆಯಿದು. ಸಂಗೀತಾಭ್ಯಾಸಿಗಳಿಗೆ ರಾಗದ ಪ್ರಥಮ ಪರಿಚಯ ಮಾಡಿಕೊಡುವ ಈ ಗೀತೆಯು ಅಖಂಡ ರಚನೆ, ಸಾಮಾನ್ಯವಾಗಿ ಪ್ರತಿಯೊಂದು ಧಾತುವಿಗೂ (ಸ್ವರ) ಒಂದೊಂದು ಮಾತು (ಸಾಹಿತ್ಯ) ಇರುತ್ತದೆ ಮತ್ತು ಸಾಹಿತ್ಯವು ದೇವತಾಸ್ತುತಿ ರೂಪದಲ್ಲಿರುತ್ತದೆ. ಸಪ್ತ ತಾಳಗಳಲ್ಲಿಯೂ, ಅವುಗಳ ಪ್ರಭೇದ ಕೆಲವು ತಾಳಗಳಲ್ಲಿಯೂ ಈ ಗೀತೆಗಳು ರಚಿತವಾಗಿರುತ್ತವೆ. ಇಂತಹ ಸುಲಭ ಶೈಲಿಯಲ್ಲಿ ಇರುವ ಗೀತೆಗಳನ್ನು ರಚಿಸಿರುವವರಲ್ಲಿ ಮುಖ್ಯರಾದವರು ಗೀತೆಯ ಆದ್ಯ ಪ್ರವರ್ತಕರಾದ ಪುರಂದರದಾಸರು, ಮತ್ತು ಪೈದಾಲ ಗುರುಮೂರ್ತಿಶಾಸ್ತ್ರಿಗಳು.

### ಗೀತೆಯಲ್ಲಿ ಎರಡು ವಿಧ :

1. ಸಾಮಾನ್ಯ ಅಥವಾ ಪಿಳ್ಳಾರಿ ಗೀತೆ
2. ಲಕ್ಷಣ ಗೀತೆ.

ತಮಿಳಿನಲ್ಲಿ ಗಣಪತಿಯನ್ನು ಪಿಳ್ಳೈಯಾರ್ ಎನ್ನುತ್ತಾರೆ. ಗಣಪತಿ ಸ್ತುತಿಯಿಂದ ಆರಂಭವಾಗುವ ಮಲಹರಿ ರಾಗದ 4 ಗೀತೆಗಳು ಪಿಳ್ಳಾರಿ ಗೀತೆಗಳು.

ಮಿಕ್ಕ ಗೀತೆಗಳು ರಾಗದ ಸಂಚಾರಗಳನ್ನು ಬಹಳ ಸರಳ ರೀತಿಯಲ್ಲಿ ನೀಡುವುದರಿಂದಲೂ, ಮಾಯಾಮಾಳವಗೌಳ ನಂತರ ಅದರ ಜನ್ಯವಾದ ಮಲಹರಿ ರಾಗದ ಸ್ವರಗಳಿಂದ ಭಿನ್ನಸ್ವರಯುಕ್ತವಾದ ರಾಗಗಳನ್ನು ವಿದ್ಯಾರ್ಥಿಗಳಿಗೆ ಪರಿಚಯಿಸುವ ಕಾರಣದಿಂದಲೂ, ಇವು ಸಂಚಾರಿ ಗೀತೆಗಳೆಂದು ಪ್ರಚಲಿತವಾಗಿದೆ.

### 1. ಸಾಮಾನ್ಯ ಅಥವಾ ಪಿಳ್ಳಾರಿ ಗೀತೆ :

ಸಾಮಾನ್ಯವಾಗಿ ದೇವತಾಸ್ತುತಿ ರೂಪದಲ್ಲಿರುವ ಈ ಗೀತೆಗಳು ಧಾತು ಮತ್ತು ರಾಗದ ಸ್ವರೂಪವನ್ನು ತಾಳ ಬದ್ಧವಾಗಿ ಚಿತ್ರಿಸುತ್ತದೆ. ಇದರ ಸಾಹಿತ್ಯ, ಸಂಸತ, ತೆಲುಗು ಅಥವಾ ಕನ್ನಡ ಭಾಷೆಗಳಲ್ಲಿರುತ್ತದೆ.

### 2. ಲಕ್ಷಣ ಗೀತೆ :

ಈ ಗೀತೆಯು ಮುಖ್ಯವಾಗಿ ರಾಗ ಲಕ್ಷಣ ಸ್ವರೂಪವನ್ನು ಸ್ಪಷ್ಟಪಡಿಸುವ ಉದ್ದೇಶದಿಂದ ರಚಿಸಲ್ಪಟ್ಟಿವೆ. ಯಾವ ರಾಗದಲ್ಲಿ ರಚಿತವಾಗಿರುತ್ತದೋ ಆ ರಾಗದ ಸಮಗ್ರ ರೂಪವನ್ನು ಅಂದರೆ ರಾಗದ ಹೆಸರು, ಸ್ವರಸ್ಥಾನ, ಜನಕ, ಜನ್ಯ, ಆರೋಹಣ, ಅವರೋಹಣ, ವರ್ಜ್ಯ, ವಕ್ರಸ್ವರಗಳು, ಗ್ರಹ, ನ್ಯಾಸ ಮುಂತಾದ ಅಂಶಗಳನ್ನು ಸಾಹಿತ್ಯದ ಮೂಲಕ ತಿಳಿಸುತ್ತದೆ.

ಜನಕ ರಾಗದಲ್ಲಿ ರಚಿತವಾಗಿರುವ ಲಕ್ಷಣ ಗೀತೆಯಲ್ಲಿ 3 ಭಾಗಗಳಿರುತ್ತವೆ. ಮೊದಲನೆಯ ಭಾಗ ಸೂತ್ರಖಂಡ, ಇದರಲ್ಲಿ ಸಾಹಿತ್ಯವು ದೇವತಾಸ್ತುತಿಯಾಗಿರುತ್ತದೆ, ಮತ್ತು ಆರೋಹಣಾವರೋಹಣಗಳನ್ನು ಸೂತ್ರದ ರೂಪದಲ್ಲಿ ತಿಳಿಸುತ್ತದೆ.

ಎರಡನೆಯ ಭಾಗ ಉಪಾಂಗ ಖಂಡ. ಇದರಲ್ಲಿ ಆ ಮೇಳದ ಉಪಾಂಗ ರಾಗಗಳ ಹೆಸರು ಸೂಚಿಸಲ್ಪಡುತ್ತದೆ. ಮೂರನೆಯ ಭಾಗ ಭಾಷಾಂಗ ಖಂಡ. ಇದರಲ್ಲಿರುವ ಸಾಹಿತ್ಯ ಆ ಮೇಳದಲ್ಲಿ ಜನ್ಯವಾಗುವ ಕೆಲವು ಪ್ರಮುಖ ಭಾಷಾಂಗ ರಾಗಗಳನ್ನು ಹೆಸರಿಸುತ್ತದೆ.

ಲಕ್ಷಣಗೀತೆಗಳನ್ನು ರಚಿಸಿದವರಲ್ಲಿ ಪ್ರಮುಖರು ಗೋವಿಂದ, ವೆಂಕಟಮಖಿ, ಪೈದಾಲ ಗುರುಮೂರ್ತಿಶಾಸ್ತ್ರಿ ಮುಂತಾದವರು.

### ಸ್ವರ ಜತಿ :

ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳನ್ನು ಹೊಂದಿ ರಾಗದ ಪೂರ್ಣಸ್ವರೂಪವನ್ನು ಭಾವಯುಕ್ತವಾಗಿ ಮತ್ತು ಗಮಕಯುಕ್ತವಾಗಿ ಹೊರಗೆಡಹುವ, ಮನೋಹರವಾದ ಪದ್ಯಬಂಧಗಳೇ ಸ್ವರಜತಿಗಳು.

ಸ್ವರ ಸಂಯೋಜನೆಯು ವಿವಿಧ ಗತಿಗಳಲ್ಲಿ ಇದ್ದು ಕೇಳಲು ರಮ್ಯವಾಗಿರುವುದಲ್ಲದೇ, ಸಾಹಿತ್ಯವು ಪ್ರಾಸಬದ್ಧವಾಗಿರುತ್ತದೆ. ಇದನ್ನು ವರ್ಣಗಳನ್ನು ಕಲಿಯುವ ಮೊದಲು ಸಂಗೀತಾಭ್ಯಾಸಿಗಳು ಕಲಿಯಬೇಕು. ಮುಂದೆ ಬರುವ ಕೃತಿಗಳ ಅಭ್ಯಾಸಕ್ಕೆ ಸ್ವರಜತಿಗಳ ಕಲಿಕೆ ಮಾರ್ಗದರ್ಶಕವಾಗಿರುತ್ತವೆ. ಸಾಹಿತ್ಯವು ದೇವತಾಸ್ತುತಿ ಅಥವಾ ವೀರಕಥೆಗಳಾಗಿರುತ್ತದೆ. ಸ್ವರಜತಿಗಳನ್ನು ರಚಿಸಿದವರಲ್ಲಿ ಪ್ರಮುಖರು ಶ್ಯಾಮಾಶಾಸ್ತ್ರಿ, ವೀಣೆ ಶೇಷಣ್ಣ, ಮೈಸೂರು ಪದ್ಮನಾಭಯ್ಯ, ಮೈಸೂರು ವಾಸುದೇವಾಚಾರ್, ಸ್ವಾತಿ ತಿರುನಾಳ್, ಆದಿ ಅಪ್ಪಯ್ಯ, ವಡಿವೇಲು, ಪೊನ್ನಯ್ಯ.

### ತಾನವರ್ಣ :

ಇದೊಂದು ವಿದ್ವತ್‌ಪೂರ್ಣವಾದ ರಾಗಭಾವದಿಂದ ಕೂಡಿದ ರಚನೆ. ಆರೋಹಣಾವರೋಹಣದಲ್ಲಿ ವರ್ಜ್ಯಾವರ್ಜ್ಯ, ಜೀವಸ್ವರಯುಕ್ತ ಸಂಚಾರಕ್ರಮ, ವಿಶೇಷ ಪ್ರಯೋಗಗಳು ಮುಂತಾದ ರಾಗದ ಸೂಕ್ಷ್ಮ ಅಂಶಗಳನ್ನು ಸೌಂದರ್ಯವನ್ನು ಹೊರಗೆಡಹುವ ರಚನೆ.

ಇದನ್ನು ಸಂಗೀತ ಕಛೇರಿಯ ಆರಂಭದಲ್ಲಿ ಹಾಡುತ್ತಾರೆ. ತಾನವರ್ಣದಲ್ಲಿ ಪಲ್ಲವಿ, ಅನುಪಲ್ಲವಿ ಮತ್ತು ಮುಕ್ತಾಯ ಸ್ವರಗಳು ಪೂರ್ವಾಂಗದಲ್ಲಿ ಬರುತ್ತವೆ.

ಪೂರ್ವಾಂಗದಲ್ಲಿ ಸಾಹಿತ್ಯ ಭಾಗ ಗೌಣವಾಗಿದ್ದು ಧಾತು ಪ್ರಧಾನವಾಗಿರುತ್ತದೆ. ಚರಣ ಮತ್ತು ಎತ್ತುಗಡೆ ಸ್ವರಗಳು ಉತ್ತರಾಂಗದಲ್ಲಿ ಬರುತ್ತವೆ. ಸಾಮಾನ್ಯವಾಗಿ ಮೊದಲ ಎತ್ತುಗಡೆ ಸ್ವರ ದೀರ್ಘಾಕ್ಷರಯುಕ್ತವಾಗಿರುತ್ತದೆ. ಮೂರನೇ ಸ್ವರ ಸರ್ವಲಘುಸ್ವರಗಳಿಂದ ಕೂಡಿರುತ್ತದೆ.

ಪ್ರತಿಯೊಂದು ಚರಣಸ್ವರವನ್ನು ಹಾಡಿದ ಮೇಲೆ ಚರಣದ ಸಾಹಿತ್ಯವನ್ನು ಪಲ್ಲವಿಯಂತೆ ಉಪಯೋಗಿಸಿ ಹಾಡುವ ಪದ್ಧತಿ ಇರುವುದರಿಂದ ಇದಕ್ಕೆ ಉಪಪಲ್ಲವಿ ಅಥವಾ ಚಿಟ್ಟೆ ಪಲ್ಲವಿ ಎಂದು ಕರೆಯುತ್ತಾರೆ. ಸಾಹಿತ್ಯವು ದೇವತಾಸ್ತುತಿ, ಆಶ್ರಯದಾತನ ಸ್ತುತಿ ಅಥವಾ ಶೃಂಗಾರ ರಸದಿಂದ ಕೂಡಿರುವುದಾಗಿರುತ್ತದೆ.

ಮಾರ್ಗದರ್ಶಿ ಶೇಷ ಅಯ್ಯಂಗಾರ್, ಆದಿ ಅಪ್ಪಯ್ಯ, ಪಲ್ಲವಿ ಗೋಪಾಲಯ್ಯರ್, ಶ್ಯಾಮಾಶಾಸ್ತ್ರಿ, ವೀಣಾಕುಪ್ಪಯ್ಯರ್, ಪಟ್ಣಂ ಸುಬ್ರಮ್ಹಣ್ಯ ಅಯ್ಯರ್, ಮೈಸೂರು ವಾಸುದೇವಾಚಾರ್, ವೀಣೆ ಶೇಷಣ್ಣ ಮುಂತಾದವರು ಉತ್ತಮ ತಾನವರ್ಣಗಳ್ನು ರಚಿಸಿದವರಲ್ಲಿ ಪ್ರಮುಖರಾಗಿದ್ದಾರೆ.

### ಕೃತಿ :

ಕೃತಿಯು ಕರ್ನಾಟಕ ಶಾಸ್ತ್ರೀಯ ಸಂಗೀತದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿರುವ ರಚನೆ. **ಯಾತ್ ಕೃತಂ ತತ್ ಕೃತಿಃ** ಎಂಬ ಹೇಳಿಕೆ ಇದೆ. ಕೃತಿಯ ಮೂಲರೂಪವೇ ಕೀರ್ತನೆ. ಕೃತಿಯಲ್ಲಿ ಮಾತಿಗಿಂತ ಧಾತುವಿಗೆ ಹೆಚ್ಚಿನ ಪ್ರಾಧಾನ್ಯ. ಆದ್ದರಿಂದ ಗಾನ ರಸವೇ ಹೆಚ್ಚಾಗಿ ಪ್ರಕಟವಾಗುವುದರಿಂದ ಕೃತಿಯು ಶ್ರೋತೃವಿಗೆ ಹೆಚ್ಚಿನ ಕರ್ಣಾನಂದವನ್ನು ಉಂಟುಮಾಡುತ್ತದೆ. ಮತ್ತು ರಾಗದ ಹೆಚ್ಚಿನ ಪರಿಚಯವನ್ನು ಸೌಂದರ್ಯವನ್ನು ಹೊರಗೆಡಹುತ್ತದೆ. ಈ ನಾದ ಪ್ರಧಾನವಾದ ರಚನೆ ರಾಗದ ಪೂರ್ಣ ಪ್ರಕಾಶನಕ್ಕಾಗಿಯೇ ಮತ್ತು ರಾಗಭಾವ ಪ್ರತಿಪಾದನೆಗೆ ಅನುಕೂಲವಾಗುವಂತೆ ಸಂಗತಿಗಳನ್ನು ಒಳಗೊಂಡಿರುತ್ತದೆ. ಇದಲ್ಲದೆ ಎಲ್ಲಾ ವಿಧವಾದ ಎಡುಪುಗಳನ್ನು ಹೊಂದಿ ತಾಳ ವೈವಿಧ್ಯವನ್ನು ಪ್ರಕಾಶಿಸುತ್ತದೆ. ಕೃತಿಗಳಲ್ಲಿ ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳೆಂದು ಮೂರು ಅಂಗಗಳಿರುತ್ತದೆ. ಕೆಲವು ಕೃತಿಗಳಲ್ಲಿ ಪಲ್ಲವಿ ಮತ್ತು ಸಮಷ್ಟಿಚರಣಗಳೆಂದು ಎರಡೇ ಅಂಗಗಳಿರುತ್ತದೆ. ಇದಲ್ಲದೆ ಕೆಲವು ಕೃತಿಗಳಲ್ಲಿ ಅಲಂಕಾರಿಕ ಅಂಗಗಳಾದ ಚಿಟ್ಟೆಸ್ವರ, ವಿಲೋಮ ಚಿಟ್ಟೇಸ್ವರ, ಮಧ್ಯಮ ಕಾಲ ಸಾಹಿತ್ಯ, ಸ್ವರಸಾಹಿತ್ಯ, ಸೊಲ್ಕಟ್ಟುಸ್ವರ, ಇತ್ಯಾದಿಗಳು ಒಡಗೂಡಿ ಹೆಚ್ಚಿನ ಮಾಧುರ್ಯ ಮತ್ತು ಗಾಂಭೀರ್ಯವನ್ನು ಕೊಡುತ್ತವೆ. ಕೃತಿಯ ಸಾಹಿತ್ಯವು ದೇವತಾಸ್ತುತಿಯಾಗಿಯೋ, ನೀತಿಬೋಧಕವಾಗಿಯೋ ಅಥವಾ ತತ್ವ ಬೋಧಕವಾಗಿಯೋ ಇರುತ್ತದೆ. ಸಂಗೀತ ತ್ರಿಮೂರ್ತಿಗಳಿಂದ ಅದರಲ್ಲೂ ತ್ಯಾಗರಾಜರಿಂದ ಕೃತಿಗಳಿಗೆ ಒಂದು ಹೊಸ ಚೇತನವೇ ಒದಗಿ ಬಂತು ಎಂದು ಹೇಳಿದರೆ ಅತಿಶಯೋಕ್ತಿಯಾಗದು. ಈ ಕೃತಿಗಳ ರಚನೆಗೆ ತ್ರಿಮೂರ್ತಿಗಳಿಗೆ ಮೊದಲೇ ಮಾರ್ಗದರ್ಶನವನ್ನು ತೋರಿಸಿದವರು· ಮಾರ್ಗದರ್ಶಿ ಶೇಷ ಅಯ್ಯಂಗಾರ್, ವೀರಭದ್ರಯ್ಯ, ಪಲ್ಲವಿ ಗೋಪಾಲಯ್ಯರ್, ತ್ಯಾಗರಾಜರ ತಾತಂದಿರಾದ ಗಿರಿರಾಜ ಕವಿ. ತ್ರಿಮೂರ್ತಿಗಳ ಕಾಲವಾದ ಮೇಲೆ ಬಂದ ಕೃತಿಕಾರರಾದ ಮೈಸೂರು ಸದಾಶಿವರಾಯರು, ಪಟ್ಣಂ ಸುಬ್ರಹ್ಮಣ್ಯ ಅಯ್ಯರ್, ಮುತ್ತಯ್ಯ ಭಾಗವತರ್, ಮೈಸೂರು ವಾಸದೇವಾಚಾರ್ ಮುಂತಾದವರು ಅಮೋಘ ಕೃತಿಗಳನ್ನು ರಚಿಸಿ ಕರ್ನಾಟಕ ಸಂಗೀತದ ರಚನಾ ಭಂಡಾರವನ್ನು ಶ್ರೀಮಂತಗೊಳಿಸಿದರು.

### ಕೀರ್ತನೆ :

ಸಂಕೀರ್ತನ ಎಂಬ ಪದದಿಂದ ಉಗಮವಾಗಿರುವ ಈ ಪದ ಹೆಚ್ಚಾಗಿ ಭಕ್ತಿರಸ ಪ್ರಧಾನವಾದ, ಅತ್ಯಂತ ಜನಪ್ರಿಯವಾದ ರಚನೆಯನ್ನು ಸೂಚಿಸುತ್ತದೆ. ಕೃತಿಗಳಿಗಿಂತ ಬಹಳ ಪುರಾತನವಾದ ಈ ರಚನೆ ಸುಮಾರು 9ನೇ ಶತಮಾನದ ಅಚಲಾನಂದರಿಂದ ಅಂಕುರಿಸಿ ವಚನಕಾರರಿಂದ ಪಲ್ಲವಿಸಿ, 12ನೇ ಶತಮಾನದಲ್ಲಿ ದಾಸಕೂಟದಿಂದ ಬೆಳೆದು, 18ನೆಯ ಶತಮಾನದಲ್ಲಿ ಪೂರ್ಣಾಕಾರವನ್ನು ಪಡೆಯಿತು. ಈ ಅಂಶವು ತಾಳ್ಳಪಾಕಂ ಕವಿಗಳ ಹರಿದಾಸರ ಮತ್ತು ನಾರಾಯಣ ತೀರ್ಥರ ಗ್ರಂಥಗಳಿಂದ ಸ್ಪಷ್ಟವಾಗುತ್ತದೆ. ಈ ರಚನೆಯಲ್ಲಿ ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳೆಂಬ ಮೂರು ಅಂಗಗಳಿರುತ್ತವೆ. ಅಲ್ಲದೆ ಸಂಗೀತ ಮತ್ತು ನಡೆ ಸರಳವಾಗಿದ್ದು, ಸಾಹಿತ್ಯಕ್ಕೆ ಪ್ರಾಮುಖ್ಯತೆ ಹೆಚ್ಚಾಗಿರುತ್ತದೆ. ಭಕ್ತಿರಸ ಪ್ರಚೋದಕವಾದ ಈ ಸಾಹಿತ್ಯದ ವಿಷಯವು ಪುರಾಣ ಪ್ರಸಂಗಗಳು, ದೇವತಾಸ್ತುತಿ, ಸಾಮಾಜಿಕ ನೀತಿ ಬೋಧಕ ರೂಪವಾಗಿ ಇರುತ್ತದೆ. ಬಹುತೇಕ ಮಧ್ಯಸ್ಥಾಯಿಯಲ್ಲೇ ಇದ್ದು ರೂಪಕ, ಆದಿ, ಮತ್ತು ಛಾಪು ತಾಳಗಳಲ್ಲಿ ಒದಗಿ ಬರುತ್ತದೆ. ತ್ಯಾಗರಾಜರ ದಿವ್ಯನಾಮ ಸಂಕೀರ್ತನೆ, ಉತ್ಸವ ಸಂಪ್ರದಾಯ ಕೀರ್ತನೆಗಳು, ಅಣ್ಣಮಾಚಾರ್ಯರ ಸಂಕೀರ್ತನೆಗಳು, ಹರಿದಾಸರ ದೇವರ ನಾಮಗಳು ಇದಕ್ಕೆ ಉದಾಹರಣೆ.

### ಜಾವಳಿ :

ಶೃಂಗಾರ ರಸಪ್ರಧಾನವಾದ, ಸುಲಭ ಶೈಲಿಯುಳ್ಳ ರಚನೆ. ಕರ್ನಾಟಕದ ಹರಿದಾಸರು ಈ ಜಾವಳಿಗೆ ಮೂಲ ಮಾತ್ರಿಕೆಯನ್ನು ಕೊಟ್ಟವರು. ಕನ್ನಡದ ಜಾವಡಿ ಎಂಬ ಪದವೇ ಜಾವಳಿ ಎಂಬ ಪದಕ್ಕೆ ಮೂಲ. ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳುಳ್ಳ ಈ ರಚನೆ ಹೆಚ್ಚಾಗಿ ಮಧ್ಯಮ ಕಾಲದಲ್ಲಿ ಮತ್ತೆ ಕೆಲವು ವಿಳಂಬ ಕಾಲದಲ್ಲಿಯೂ ಇರುತ್ತವೆ. ಹಿಂದೂಸ್ಥಾನಿ ಪದ್ಧತಿಯ ಘಜಲ್‌ಗೆ ಇದನ್ನು ಹೋಲಿಸಬಹುದು. ಇದರಲ್ಲಿ ಬರುವ ಸಾಹಿತ್ಯ ಅಷ್ಟು

ಗಂಭೀರ ಮಟ್ಟದಲ್ಲಿರದೆ, ಸಾಮಾನ್ಯವಾಗಿ ನಾಯಕ-ನಾಯಕಿ, ಸಖಿ ಪಾತ್ರಗಳ ನಡುವಣ ಈರ್ಷ್ಯೆ, ಕೋಪ, ಪ್ರೇಮ ನಿವೇದನ ಪ್ರಧಾನವಾದ ಸಾಹಿತ್ಯವಿರುತ್ತದೆ. ಈ ರಚನೆಯು 19ನೇ ಶತಮಾನದಿಂದ ಕಂಡುಬಂದಿದೆ. ಕನ್ನಡ, ತೆಲುಗು, ಮತ್ತು ತಮಿಳು ಭಾಷೆಗಳಲ್ಲಿ ರಚಿತವಾಗಿವೆ. ಸಾಧಾರಣವಾಗಿ ಚಿಟ್ಟೆಸ್ವರಗಳಿಲ್ಲದ ಈ ರಚನೆಯನ್ನು ರಚಿಸಿರುವವರಲ್ಲಿ ಧರ್ಮಪುರಿ ಸುಬ್ಬರಾಯರ್, ಪಟ್ಟಾಭಿರಾಮಯ್ಯ, ಸ್ವಾತಿ ತಿರುನಾಳ್, ಪಟ್ಣಂ ಸುಬ್ರಮಣ್ಯ ಅಯ್ಯರ್, ಸುರಪುರದ ಆನಂದದಾಸರು, ಮೈಸೂರು ವಾಸುದೇವಾಚಾರ್ಯರು, ಅಳಿಯ ಲಿಂಗರಾಜೇ ಅರಸ್, ಮುಮ್ಮಡಿ ಕೃಷ್ಣರಾಜ ಒಡೆಯರ್ ಇವರುಗಳು ಪ್ರಮುಖರು.

ಮುಖ್ಯವಾಗಿ ನಾಟ್ಯಕ್ಕಾಗಿ ರಚಿತವಾಗಿರುವ ಈ ರಚನೆಯು ಜತಿಯಿಂದಲೇ ಆರಂಭವಾಗುತ್ತದೆ. ಮಾತು, ಜತಿ ಮತ್ತು ಸ್ವರಗಳಿಂದ ಕೂಡಿ, ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳನ್ನು ಒಳಗೊಂಡಿರುತ್ತದೆ. ಸುಂದರವಾದ ಸಂಗತಿಗಳ ಪ್ರಯೋಗದಿಂದ ಕಿವಿಗೆ ಇಂಪಾಗಿ ಮೂಡಿ ಬರುತ್ತದೆ. ಇದನ್ನು ಉತ್ತರಾದಿ ಸಂಗೀತದ ತರಾನಕ್ಕೆ ಹೋಲಿಸಬಹುದು. ಇದರಲ್ಲಿ ಬರುವ ಕ್ಲಿಪ್ತ ಸಾಹಿತ್ಯವು ಶೃಂಗಾರ ರಸ ಪ್ರಧಾನವಾಗಿ ಅಥವಾ ಆಶ್ರಯದಾತನ ಸ್ತೋತ್ರವಾಗಿ ಇರುತ್ತದೆ. ಇದನ್ನು ರಚಿಸಿದವರಲ್ಲಿ ಪ್ರಮುಖರು ಮಹಾ ವೈದ್ಯನಾಥ ಅಯ್ಯರ್, ಸ್ವಾತಿ ತಿರುನಾಳ್, ಮೈಸೂರು ಸದಾಶಿವರಾವ್, ವೀಣೆ ಶೇಷಣ್ಣ, ರಾಮನಾಡ್ ಶ್ರೀನಿವಾಸ ಅಯ್ಯಂಗಾರ್, ಪಟ್ಣಂ ಸುಬ್ರಮಣ್ಯ ಅಯ್ಯರ್, ಮೈಸೂರು ವಾಸುದೇವಾಚಾರ್ಯರು, ಪಲ್ಲವಿ ಗೋಪಾಲಯ್ಯ, ತಂಜಾವೂರು ಪೊನ್ನಯ್ಯಪಿಳ್ಳೆ ಮುಂತಾದವರು.



# ಅಧ್ಯಾಯ - 11
# ವಾಗ್ಗೇಯಕಾರರ ಸಂಕ್ಷಿಪ್ತ ಜೀವನ ಚರಿತ್ರೆ

**ವಾಗ್ಗೇಯಕಾರರು :**

ಕರ್ನಾಟಕ ಸಂಗೀತದಲ್ಲಿ ವಾಗ್ಗೇಯಕಾರರು ಬಹಳ ಪ್ರಮುಖ ಪಾತ್ರವನ್ನು ವಹಿಸಿದ್ದಾರೆ. ಶಾಸ್ತ್ರೀಯ ಸಂಗೀತ ಪರಂಪರೆಯನ್ನು ಉಳಿಸಿ ಬೆಳೆಸಲು ಕಾರಣರಾಗಿದ್ದಾರೆ.

**ವಾಚಂ ಗೇಯಂ ಚ ಕುರುತೇ ಯಃ ಸಃ ವಾಗ್ಗೇಯ ಕಾರಃ**

ಸಾಹಿತ್ಯ ಮತ್ತು ಸಂಗೀತವೆರಡನ್ನೂ ರಚಿಸುವವನು ವಾಗ್ಗೇಯಕಾರ. ಉತ್ತಮ ಮಟ್ಟದ ರಚನೆಯನ್ನು ರಚಿಸುವವನು ಶ್ರೇಷ್ಠ ವಾಗ್ಗೇಯಕಾರನೆನಿಸುತ್ತಾನೆ. ಒಳ್ಳೆಯ ಸಂಗೀತವನ್ನು ರಚಿಸಿ ಸಾಹಿತ್ಯವನ್ನು ಮಧ್ಯಮ ಮಟ್ಟದಲ್ಲಿ ರಚಿಸುವವನು ಮಧ್ಯಮ ವಾಗ್ಗೇಯಕಾರನು. ಇತರರು ರಚಿಸಿದ ಸಂಗೀತಕ್ಕೆ ಸಾಹಿತ್ಯವನ್ನು ಬರೆಯುವವನು ಅಧಮ ವಾಗ್ಗೇಯಕಾರನೆನಿಸುತ್ತಾನೆ. ಉತ್ತಮ ಮತ್ತು ಮಧ್ಯಮ ವಾಗ್ಗೇಯಕಾರರ ಕೊಡುಗೆಯಿಂದ ಕರ್ನಾಟಕ ಸಂಗೀತ ರಚನ ಭಂಡಾರವು ಶ್ರೀಮಂತವಾಗಿದೆ. ಇಂತಹ ವಾಗ್ಗೇಯಕಾರರಲ್ಲಿ ಕೆಲವರ ಸಂಕ್ಷಿಪ್ತ ಜೀವನವನ್ನೂ, ಕರ್ನಾಟಕ ಸಂಗೀತಕ್ಕೆ ಅವರ ಕೊಡುಗೆಯನ್ನೂ ತಿಳಿಸಲಾಗಿದೆ.

## ಶ್ಯಾಮಶಾಸ್ತ್ರಿಗಳು (1762 - 1827)



ತಂಜಾವೂರಿನ ಶರಭೋಜಿ ಮಹಾರಾಜನ ಆಸ್ಥಾನದಲ್ಲಿ ಆಂಧ್ರದಿಂದ ಬಂದ ಪ್ರಖ್ಯಾತ ವಿದ್ವಾಂಸರ ಬೊಬ್ಬಿಲಿ ಕೇಶವಯ್ಯನು ಸವಾಲು ಮಾಡಿದಾಗ ಆಸ್ಥಾನದ ಗೌರವ ಉಳಿಸಲು ಸ್ಪರ್ಧೆಗೆ ಒಪ್ಪಿಕೊಂಡು, ಶರಭನಂದನ ತಾಳದ ಪಲ್ಲವಿಯನ್ನು ಹಾಡಿ ಅವರನ್ನು ಸೋಲಿಸಿದಂಥಾ ಮಹಾ ಮಹಿಮರು ಶ್ಯಾಮಾಶಾಸ್ತ್ರಿಗಳು. ಸಂಗೀತ ತ್ರಿಮೂರ್ತಿಗಳಾದ ತ್ಯಾಗರಾಜರು, ಮುತ್ತುಸ್ವಾಮಿ ದೀಕ್ಷಿತರು, ಶ್ಯಾಮಾ ಶಾಸ್ತ್ರಿಗಳಲ್ಲಿ ಶಾಸ್ತ್ರಿಗಳೇ ವಯೋಜೇಷ್ಠರು.

ತಂಜಾವೂರು ಜಿಲ್ಲೆಯ ತಿರುವಾರೂರಿನಲ್ಲಿ ಚಿತ್ರಭಾನು ಸಂವತ್ಸರದ ಮೇಷ ರವಿ, ಕೃತ್ತಿಕಾ ನಕ್ಷತ್ರದಲ್ಲಿ ಅಂದರೆ 1762ನೇ ಏಪ್ರಿಲ್ 26ರಂದು ಶ್ಯಾಮಶಾಸ್ತ್ರಿಗಳ ಜನನ. ತಂದೆ ವಿಶ್ವನಾಥಯ್ಯರ್. ದ್ರಾವಿಡ ಸ್ಮಾರ್ತ ಬ್ರಾಹ್ಮಣರಲ್ಲಿ ವಡಮರ ಪಂಗಡಕ್ಕೆ ಸೇರಿದವರು. ಗೌತಮ ಗೋತ್ರ, ಬೋಧಾಯನ ಸೂತ್ರ, ಮಗುವಿಗೆ **ವೆಂಕಟ ಸುಬ್ರಹ್ಮಣ್ಯ** ಎಂದು ನಾಮಕರಣ ಮಾಡಿದರು. ಮುದ್ದಿಗಾಗಿ ಶ್ಯಾಮ ಎಂದು ಕರೆಯುತ್ತಿದ್ದುದರಿಂದ ಶ್ಯಾಮಶಾಸ್ತ್ರಿಗಳೆಂದು ಖ್ಯಾತರಾಗಿದ್ದಾರೆ. ಪ್ರಾಪ್ತ ವಯಸ್ಸಿಗೆ ಉಪನಯನವಾಗಿ ತಂದೆಯಿಂದ ವೇದಾಧ್ಯಯನವನ್ನು ಮಾಡಿಕೊಂಡು ಸಂಸ್ಕೃತ ಮತ್ತು ತೆಲುಗು ಭಾಷೆಗಳನ್ನು ಕಲಿತರು. ಶಾಸ್ತ್ರಿಗಳಿಗೆ ಹದಿನೆಂಟು ವಯಸ್ಸಾದಾಗ ತಂಜಾವೂರಿಗೆ ಬಂದು ನೆಲಸಿದರು. ಶಾಸ್ತ್ರಿಗಳಿಗೆ ಮಧುರವಾದ ಕಂಠಶ್ರೀ ಇದ್ದರೂ ಸಹ ಸಂಗೀತವನ್ನು

ಕಲಿಸಲು ಅವರ ತಾಯಿ ತಂದೆಯರು ಪ್ರಯತ್ನಿಸಲಿಲ್ಲ. ಒಮ್ಮೆ ಸಂಗೀತ ಮತ್ತು ನಾಟ್ಯದಲ್ಲಿ ನಿಪುಣರಾದ ಸಂಗೀತ ಸ್ವಾಮಿಗಳೆಂಬ ಆಂಧ್ರ ಬ್ರಾಹ್ಮಣ ಸಂನ್ಯಾಸಿಗಳು (ಕಾಶೀ ವಿಶ್ವನಾಥನಿಗೆ ಸಂಗೀತ, ನಾಟ್ಯ ಕೈಂಕರ್ಯವನ್ನು ಮಾಡುತ್ತಿದ್ದವರು) ಚಾತುರ್ಮಾಸ ವ್ರತಾಚರಣೆಗೆ ತಂಜಾವೂರಿಗೆ ಬಂದರು. ವಿಶ್ವನಾಥಯ್ಯರ್‌ರವರು ಸ್ವಾಮಿಗಳನ್ನು ಭಿಕ್ಷೆಗೆ ತಮ್ಮ ಮನೆಗೆ ಆಹ್ವಾನಿಸಿದಾಗ ಶ್ಯಾಮಾಶಾಸ್ತ್ರಿಗಳಿಗೆ ಇದ್ದ ಸಂಗೀತಾಸಕ್ತಿಯನ್ನು ಗಮನಿಸಿ ಅಂದಿನಿಂದಲೇ ಅವರಿಗೆ ರಾಗ ಮತ್ತು ತಾಳ ಪ್ರಸ್ತಾರ ಕ್ರಮವನ್ನು ವಿಶದವಾಗಿ ಪಾಠ ಮಾಡಿದರು. ಉತ್ತಮ ಗ್ರಹಣ ಶಕ್ತಿಯಿದ್ದುದರಿಂದ ಶಾಸ್ತ್ರಿಗಳು ಪಾಂಡಿತ್ಯ ಪಡೆದರು. ಸ್ವಾಮಿಗಳು ಸಂಗೀತಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಕೊಟ್ಟು ಆಶೀರ್ವದಿಸಿ ಪಚ್ಚಿಮಿರಿಯಂ ಆದಿ ಅಪ್ಪಯ್ಯನವರ ಸಂಗೀತವನ್ನು ಕೇಳು ಎಂದು ಆಜ್ಞಾಪಿಸಿ ಕಾಶಿಗೆ ತೆರಳಿದರು.

ಬಂಗಾರು ಕಾಮಾಕ್ಷಿಯ ಸೇವೆ ಮಾಡಿಕೊಂಡು ಅನೇಕ ರಚನೆಗಳನ್ನು ಕ್ಲಿಷ್ಟವಾದ ರಾಗಗಳಲ್ಲೂ, ತಾಳಗಳಲ್ಲೂ ರಚಿಸಿದರು. ಇವರ ಮೊದಲ ಕೃತಿ ಜನನಿ ನತಜನ ಪರಿಪಾಲಿನಿ ಸಾವೇರಿ ರಾಗದಲ್ಲಿದ್ದು ಸಂಸ್ಕೃತ ಭಾಷೆಯಲ್ಲಿದೆ. ಸಂಗೀತದೊಡನೆ ಜ್ಯೋತಿಷ್ಯ ಶಾಸ್ತ್ರದಲ್ಲೂ ಪರಿಣಿತಿ ಪಡೆದಿದ್ದ ಶಾಸ್ತ್ರಿಗಳು ಶಾಪಾನುಗ್ರಹ ಶಕ್ತಿಯನ್ನು ಹೊಂದಿದ್ದರು. ತಮ್ಮ ಸಹಧರ್ಮಿಣಿ ಸ್ವರ್ಗಸ್ಥಳಾದ ಆರನೆಯ ದಿನವೇ ಅಂದರೆ ಒಂದನೇ ಫೆಬ್ರವರಿ 1827 ಇಸವಿಯಂದು ತಮ್ಮ 65ನೇ ವಯಸ್ಸಿನಲ್ಲಿ ಪರಮಾತ್ಮನಲ್ಲಿ ಲೀನರಾದರು.

ಶ್ರೀ ಕಾಮಾಕ್ಷಿದೇವಿಯ ಭಕ್ತರಾಗಿದ್ದ ಇವರು ಆಕೆಯ ಜೊತೆಯಲ್ಲಿ ಸಂಭಾಷಣೆ ನಡೆಸಿದ ಮಹಾನುಭಾವರು. ಆಕೆಯನ್ನು ಅರ್ಚಿಸಿ, ವರ್ಣಿಸಿ ಹಾಡುವುದೇ ಇವರ ಗುರಿ. ಇವರ ಕೃತಿಗಳು ಅಪಾರ ಪಾಂಡಿತ್ಯದಿಂದಲೂ, ಭಕ್ತಿಯಿಂದಲೂ ಕೂಡಿದೆ. ಶಿಷ್ಯರು ಕಡಿಮೆ ಇದ್ದ ಕಾರಣ ಇವರ ರಚನೆಗಳು 300ಕ್ಕೂ ಮೇಲ್ಪಟ್ಟಿದ್ದರೂ ಕೇವಲ 35 ರಚನೆಗಳು ಮಾತ್ರ ಪ್ರಚಾರದಲ್ಲಿವೆ. ಇದರಲ್ಲಿ ಮೀನಾಕ್ಷಿ ಮೇಲೆ ರಚಿಸಿರುವ ಒಂಭತ್ತು ಕೃತಿಗಳಿಂದ ಕೂಡಿದ ನವರತ್ನಮಾಲಿಕೆಯು ಸೇರಿದೆ. ಇವರು ರಚಿಸಿರುವ ಸ್ವರಜತಿ, ವರ್ಣ, ಕೃತಿಗಳು ಸಂಸ್ಕೃತ, ತೆಲುಗು ಮತ್ತು ತಮಿಳು ಭಾಷೆಗಳಲ್ಲಿದ್ದು, ಆದಿ, ರೂಪಕ, ಛಾಪು ತಾಳಗಳಲ್ಲಿ **ಶ್ಯಾಮಕೃಷ್ಣ** ಎಂಬ ಅಂಕಿತದಿಂದ ಕೂಡಿವೆ. ಇವರ ರಚನಾ ಶೈಲಿಯು ಕದಳೀಪಾಕವೆನಿಸಿದೆ.

## ತ್ಯಾಗರಾಜರು

(ಕ್ರಿ. ಶ. 1767 - 1847)



ಕರ್ನಾಟಕ ಸಂಗೀತ ಚರಿತ್ರೆಯಲ್ಲಿ ಹದಿನೆಂಟನೆಯ ಶತಮಾನವನ್ನು ಸ್ವರ್ಣಯುಗವೆಂದು ಕರೆಯಬಹುದು. ಸಂಗೀತ ತ್ರಿಮೂರ್ತಿಗಳಾದ ಶ್ಯಾಮಾಶಾಸ್ತ್ರಿ, ತ್ಯಾಗರಾಜರು ಮತ್ತು ಮುತ್ತುಸ್ವಾಮಿ ದೀಕ್ಷಿತರು ತಮ್ಮ ಅಪೂರ್ವ ಕೊಡುಗೆಯಿಂದ ಕರ್ನಾಟಕ ಸಂಗೀತವನ್ನು ಚಿರನೂತನಗೊಳಿಸಿದರು. ಇವರಲ್ಲಿ ತ್ಯಾಗರಾಜರನ್ನು ವಾಗ್ಗೇಯಕಾರ ಸಾರ್ವಭೌಮರೆನ್ನಬಹುದು. ಗಾಯಕರೂ, ವೈಣಿಕರೂ, ಶಾಸ್ತ್ರವೇತ್ತರೂ ಆದ ಇವರು ಶ್ರೀ ರಾಮನ ಅನನ್ಯ ಭಕ್ತರು.

ಮುರಕನಾಡು ಬ್ರಾಹ್ಮಣರಾದ ರಾಮಬ್ರಹ್ಮ ಮತ್ತು ಸೀತಮ್ಮ ದಂಪತಿಗಳಿಗೆ ಕ್ರಿ.ಶ.1767 ಮೇ ತಿಂಗಳ ನಾಲ್ಕರಂದು ತಿರುವಾರೂರಿನಲ್ಲಿ (ತಂಜಾವೂರು ಜಿಲ್ಲೆ) ತ್ಯಾಗರಾಜರು ಜನಿಸಿದರು. ತಾಯಿಯ ಪರಂಪರೆಯಿಂದ ಸಂಗೀತ, ತಂದೆಯ

ಕಡೆಯಿಂದ ಸಾಹಿತ್ಯ ಸರಸ್ವತಿ ಇವರಿಗೆ ಒಲಿದಿದ್ದು ಇವರು ಶ್ರೇಷ್ಠ ವಾಗ್ಗೇಯಕಾರರಾಗಲು ಅನುವು ಮಾಡಿಕೊಟ್ಟಿತು. ತಾಯಿಯ ತಂದೆ ವೀಣಾ ಕಾಳಹಸ್ತಿ ಅಯ್ಯರ್, ತಂಜಾವೂರಿನ ಆಸ್ಥಾನ ವಿದ್ವಾಂಸರು. ತಂದೆಯ ತಂದೆ ಗಿರಿರಾಜ ಕವಿ, ಷಹಾಜಿ ಮಹಾರಾಜನ ಆಸ್ಥಾನ ಕವಿ. ತಾಯಿ ಸುಶ್ರಾವ್ಯವಾಗಿ ಹಾಡುತ್ತಿದ್ದರು. ತಂದೆ ರಾಮಾಯಣ ಪಾರಾಯಣ ವಾಚನ ಮಾಡುತ್ತಿದ್ದರು. ಐದು ವರ್ಷದ ಮಗು ರಾಮಾಯಣದ 24,000 ಶ್ಲೋಕವನ್ನು ನಿರರ್ಗಳವಾಗಿ ವಾಚನಮಾಡುತ್ತಿತ್ತು.

ತಂದೆಯಿಂದ ತೆಲುಗು, ಸಂಸ್ಕೃತ ಭಾಷೆಗಳ ಅಭ್ಯಾಸ. ಸೊಂಟಿ ವೆಂಕಟರಮಣ ಭಾಗವತರಲ್ಲಿ ಸಂಗೀತ ಶಿಕ್ಷಣ, ಇವುಗಳೊಡನೆ ಗಣಿತ, ಮಂತ್ರ ಮತ್ತು ಜ್ಯೋತಿಷ್ಯ ಶಾಸ್ತ್ರಗಳ ಕಲಿಕೆ.

ಹತ್ತನೆಯ ವಯಸ್ಸಿನಿಂದಲೇ ತ್ಯಾಗರಾಜರ ವಾಗ್ಗೇಯಕಾರ ಜೀವನವು ಪ್ರಾರಂಭವಾಯಿತು. **ನಮೋ ನಮೋ ರಾಘವಾಯ, ತವದಾಸೋಹಂ** ಎಂಬ ದಿವ್ಯನಾಮ ಸಂಕೀರ್ತನೆಗಳು ಪ್ರಥಮವಾಗಿ ಮೂಡಿ ಬಂದಿತು. ನಾರದರು **ಸ್ವರಾರ್ಣವ** ಎಂಬ ಸಂಗೀತಶಾಸ್ತ್ರ ಗ್ರಂಥವನ್ನು ಇವರಿಗೆ ಪ್ರದಾನ ಮಾಡಿದರೆಂದು ಪ್ರತೀತಿ.

ತ್ಯಾಗರಾಜರು ಹದಿನೆಂಟನೆಯ ವಯಸ್ಸಿನಲ್ಲಿ ವಿವಾಹವಾಗಿ ಮೊದಲ ಪತ್ನಿ ಮೃತಳಾಗಲು ಅವರ ತಂಗಿ **ಕನಕಾಂಬಾಳ್** ಎಂಬ ಕನ್ಯೆಯನ್ನು ವಿವಾಹವಾಗಿ, **ಸೀತಮ್ಮ** ಎಂಬ ಮಗಳನ್ನು ಪಡೆದರು. ರಾಮಕೃಷ್ಣ ಯತೀಂದ್ರರೆಂಬ ಮುನಿವರ್ಯರಿಂದ ತಾರಕನಾಮ ಉಪದೇಶವಾಯಿತು. ನಂತರ ತೊಂಬತ್ತಾರು ಕೋಟಿ ರಾಮನಾಮವನ್ನು ಇಪ್ಪತ್ತೊಂದು ವರ್ಷಗಳಲ್ಲಿ ಮುಗಿಸಿದರು. ಪ್ರತಿಯೊಂದು ಕೋಟಿ ರಾಮನಾಮ ಮುಗಿದಾಗ ಶ್ರೀರಾಮನು ಇವರಿಗೆ ದರ್ಶನ ಕೊಡುತ್ತಿದ್ದನಂತೆ.

ತ್ಯಾಗರಾಜರದು ಸರಳ ಜೀವನ. **ನಿಧಿ ಚಾಲ ಸುಖಮಾ ಶ್ರೀ ರಾಮುನಿ ಸನ್ನಿಧಿ ಸೇವ ಸುಖಮಾ** ಎಂದು ಹಾಡಿ ರಾಜಾಶ್ರಯವನ್ನು ತ್ಯಜಿಸಿ ರಾಮನ ಸೇವೆಯನ್ನು ಮಾಡಿದ ಪುಣ್ಯ ಪುರುಷರು. ನಾದೋಪಾಸನೆಯ ಮೂಲಕ ಮೋಕ್ಷವನ್ನು ಪಡೆಯಬಹುದೆಂದು ತಮ್ಮ ಜೀವನದ ಮೂಲಕ ತೋರಿಸಿದರು. ಪ್ರತಿಭಾವಂತರಾದ ತ್ಯಾಗರಾಜರು ಕವಿಯಾಗಿ, ಗೃಹಸ್ಥರಾಗಿ, ತತ್ವಜ್ಞಾನಿಯಾಗಿ, ತ್ಯಾಗಿಯಾಗಿ ತಮ್ಮ ಕೊನೆಯ ಕಾಲದಲ್ಲಿ ಸಂನ್ಯಾಸವನ್ನು ಸ್ವೀಕರಿಸಿ **ನಾದಬ್ರಹ್ಮಾನಂದ** ರೆನಿಸಿಕೊಂಡರು. ಪುಷ್ಯ ಬಹುಳ ಪಂಚಮಿಯಂದು ಅಂದರೆ ಜನವರಿ 6 ರಂದು 1847 ನೇ ಇಸವಿಯಲ್ಲಿ ತಮ್ಮ ಭೌತಿಕ ಶರೀರವನ್ನು ತಿರುವಯ್ಯಾರಿನಲ್ಲಿ ತ್ಯಜಿಸಿ ನಾದಬ್ರಹ್ಮನಲ್ಲಿ ಲೀನರಾದರು. ಈ ಪುಣ್ಯತಿಥಿಯಂದು ಇಂದಿಗೂ ತಿರುವಯ್ಯಾರಿನಲ್ಲಿ ಅವರ ಆರಾಧನೆ ವಿಜೃಂಭಣೆಯಿಂದ ನಡೆಯುತ್ತಿದೆ.

ಕರ್ನಾಟಕ ಸಂಗೀತಕ್ಕೆ ತ್ಯಾಗರಾಜರ ಸೇವೆ ಅಮೋಘವಾದುದು. ಸಂಗೀತ ರಚನೆಗಳಲ್ಲಿ ಅತ್ಯಂತ ಪ್ರಸಿದ್ಧವಾದ ಕೃತಿಯನ್ನು ಪರಿಷ್ಕರಿಸಿ ಕೃತಿಯಲ್ಲಿ ಸಂಗತಿಗಳನ್ನು ರೂಢಿಗೆ ತಂದವರಿವರು. ರೂಢಿಯಲ್ಲಿಲ್ಲದ ಅನೇಕ ಮೇಳ ರಾಗಗಳಿಗೆ ರೂಪವನ್ನು ಕೊಟ್ಟು ಕೃತಿಗಳನ್ನು ರಚಿಸಿದರು. ಹೊಸ ರಾಗಗಳನ್ನು ಸೃಷ್ಟಿಸಿ ಕೃತಿಗಳ ಮೂಲಕ ಅವುಗಳನ್ನು ಚೇತನಗೊಳಿಸಿದರು. ರಚನೆಗಳಿಗೆ ಬಳಸಿರುವ ತಾಳಗಳು ಆದಿ, ರೂಪಕ, ಛಾಪುತಾಳಗಳು ದೇಶಾದಿ ಮತ್ತು ಮಧ್ಯಾದಿ ತಾಳಗಳು. ತ್ಯಾಗರಾಜ ಎಂಬ ಅಂಕಿತದಿಂದ ದಿವ್ಯನಾಮ ಸಂಕೀರ್ತನೆಗಳು, ಉತ್ಸವ ಸಂಪ್ರದಾಯ, ಪ್ರಹ್ಲಾದ ಭಕ್ತಿ ವಿಜಯ, ನೌಕಾಚರಿತ್ರ ಮತ್ತು ಸೀತಾರಾಮ ವಿಜಯವೆಂಬ ಗೇಯ ನಾಟಕಗಳು, ಕೃತಿ ಗುಚ್ಛಗಳು, ಸ್ಥಳ ಕೃತಿಗಳನ್ನೂ ರಚಿಸಿದ್ದಾರೆ. ಇವುಗಳಲ್ಲಿ ಪ್ರಸಿದ್ಧವಾದುದು **ಪಂಚರತ್ನ ಕೃತಿಗಳು.**

ಪೂರ್ವಪಂಚಕ ಘನರಾಗಗಳಾದ ನಾಟ, ಗೌಳ, ಆರಭಿ, ವರಾಳಿ, ಶ್ರೀ ರಾಗದಲ್ಲಿವೆ ಈ ಕೃತಿಗಳು. ತೆಲುಗು ಮತ್ತು ಸಂಸ್ಕೃತ ಭಾಷೆಯಲ್ಲಿರುವ ಇವರ ಕೃತಿಯ ಶೈಲಿಯನ್ನು ದ್ರಾಕ್ಷಾಪಾಕಕ್ಕೆ ಹೋಲಿಸಲಾಗಿದೆ. ಸಾಮಾಜಿಕ ಮೌಲ್ಯದ ಬಗ್ಗೆ ಕಳಕಳಿ ಇದ್ದ ಇವರು ತಮ್ಮ ಕೃತಿಗಳ ಮೂಲಕ ಸಮಾಜವನ್ನು ತಿದ್ದುವ ಕಾರ್ಯವನ್ನು ಮಾಡಿದ್ದಾರೆ. ಭಜನ ಸಂಪ್ರದಾಯವನ್ನು ಕ್ರಮಪಡಿಸಿ ಪಂಡಿತ ಪಾಮರರಾದಿಯಾಗಿ ಮಕ್ಕಳೂ, ವೃದ್ಧರೂ ಭಜನೆಯಲ್ಲಿ ಭಾಗವಹಿಸಲು ಅನುವು ಮಾಡಿಕೊಟ್ಟರು. ಅಪಾರ ಶಿಷ್ಯಕೋಟಿಯ ಮೂಲಕ ಅಳಿಯದ ಸಂಗೀತ ಸಾಮ್ರಾಜ್ಯವನ್ನು ಸ್ಥಾಪಿಸಿದ್ದಾರೆ ತ್ಯಾಗರಾಜರು.

## ಮುತ್ತುಸ್ವಾಮಿ ದೀಕ್ಷಿತರು

**(ಕ್ರಿ. ಶ.1775 - 1835)**



ಕರ್ನಾಟಕ ಸಂಗೀತದ ತ್ರಿಮೂರ್ತಿಗಳಲ್ಲಿ ಒಬ್ಬರಾದ ಮುತ್ತುಸ್ವಾಮಿ ದೀಕ್ಷಿತರ್ ಅವರು, ಹಂಸಧ್ವನಿ ರಾಗದ ಕರ್ತೃಗಳಾದ ರಾಮಸ್ವಾಮಿ ದೀಕ್ಷಿತರ್ ಅವರ ಸುಪುತ್ರರಾಗಿ 1775 ರಲ್ಲಿ ತಿರುವಾರೂರಿನಲ್ಲಿ ಜನಿಸಿದರು. ಸಂಗೀತ ಮತ್ತು ಸಾಹಿತ್ಯದಲ್ಲಿ ಅಪಾರ ಪಾಂಡಿತ್ಯವು ಅನುವಂಶೀಕವಾಗಿ ಇವರಿಗೆ ಒಲಿದು ಬಂದದ್ದು ಇವರ ಸುಕೃತವೇ ಸರಿ. ಅಲ್ಲದೆ ಕ್ರಮಾಂತ ವೇದಾಧ್ಯಯನ, ಕಾವ್ಯಾಲಂಕಾರ, ಜ್ಯೋತಿಃಶಾಸ್ತ್ರ, ವೈದ್ಯ ಮತ್ತು ಮಂತ್ರ ಶಾಸ್ತ್ರಗಳಲ್ಲಿ ಉದ್ದಾಮ ಪಂಡಿತರಾಗಿದ್ದರು. ಸ್ವತಃ ನಿಷ್ಣಾತ ವೈಣಿಕರಾಗಿದ್ದರಿಂದ, ವೀಣೆಯಲ್ಲಿ ಪಂಚದಶ ಗಮಕಗಳನ್ನು ಪ್ರಯೋಗ ಮಾಡಿ ತೋರಿಸಿದರಲ್ಲದೆ, ಸಂಗೀತಕ್ಕೆ ಅವುಗಳ ಔಚಿತ್ಯವನ್ನು ತಿಳಿಪಡಿಸಿದರು. ಅವರ ಚಿಕ್ಕ ವಯಸ್ಸಿನಲ್ಲಿ ಚಿದಂಬರನಾಥ ಯೋಗಿ ಎಂಬ ಒಬ್ಬ ಸಿದ್ಧಪುರುಷರ ಸಂಪರ್ಕ ಒದಗಿ ಅವರಿಂದ ಶ್ರೀ ವಿದ್ಯಾದೀಕ್ಷೆಯನ್ನು ಪಡೆದು ಕಾಶೀಯಾತ್ರೆ ಮಾಡಿದರು. ಈ ಸಂದರ್ಭದಲ್ಲಿ ಅವರಿಗೆ ಉತ್ತರಾದಿ ಸಂಗೀತದಲ್ಲಿ ಶಿಕ್ಷಣ ಪಡೆಯಲು ಸದವಕಾಶ ಒದಗಿ, ದಕ್ಷಿಣಾದಿ ಮತ್ತು ಉತ್ತರಾದಿ ಸಂಗೀತ ಪದ್ಧತಿಗಳಲ್ಲಿ ಅಪಾರ ಪಾಂಡಿತ್ಯವನ್ನು ಪಡೆದವರಾದರು.

ತಿರುತ್ತಣಿಯ ಸುಬ್ರಮಣ್ಯಸ್ವಾಮಿಯ ಆರಾಧಕರಾದ್ದರಿಂದ **ಗುರುಗುಹ** ಎಂಬ ಅಂಕಿತವನ್ನು ಪಡೆದು ಅನೇಕ ಉತ್ಕೃಷ್ಟ ಕೃತಿಗಳನ್ನು ರಚಿಸಿದರು. ಶ್ರೀ ವಿದ್ಯಾ ಉಪಾಸಕರಾದ್ದರಿಂದ ದೇವಿಯ ಕೃತಿಗಳನ್ನು ಅಮೋಘವಾಗಿ ರಚಿಸಿದ್ದಾರೆ. ಅದ್ವೈತ ವೇದಾಂತದ ಅನುಯಾಯಿಗಳಾದ್ದರಿಂದ ಹರಿಹರವೆಂಬ ಭೇದವಿಲ್ಲದೆ ತಾವು ಸಂದರ್ಶಿಸಿದ ದೇವತೆಗಳನ್ನೆಲ್ಲಾ ಕೀರ್ತಿಸಿ ವೆಂಕಟಮುಖಿಯ ಚತುರ್ದಂಡಿ ಪ್ರಕಾಶಿಕೆಯನ್ನು ಅನುಸರಿಸಿ ಅನರ್ಘ್ಯ ಕೃತಿಗಳನ್ನು ರಚಿಸಿದ್ದಾರೆ. ಕೃತಿಗಳಲ್ಲದೆ ರಾಗಮಾಲಿಕೆಗಳು, ಅಪೂರ್ವ ರಾಗಗಳ ಲಕ್ಷಣ ಗೀತೆಗಳನ್ನು ರಚಿಸಿದ್ದಾರೆ. ಆಂಗ್ಲವರ್ಣಮಟ್ಟುಗಳನ್ನು ಹೋಲುವ ಮಧ್ಯಮಕಾಲದ ಸಾಹಿತ್ಯವುಳ್ಳ ರಚನೆಗಳನ್ನು ಸಂಸ್ಕೃತದಲ್ಲಿ ರಚಿಸಿದ್ದಾರೆ.

ಇವರ ಕೃತಿಗಳ ವೈಶಿಷ್ಟ್ಯವೇನೆಂದರೆ, ಅವು ಅರ್ಥಗರ್ಭಿತವಾಗಿಯೂ ಮತ್ತು ದೇವತಾಸ್ತುತಿಗಳಾಗಿಯೂ ಇರುವುದಲ್ಲದೆ, ಶ್ರೀ ವಿದ್ಯೆ, ಮಂತ್ರಶಾಸ್ತ್ರ, ಜ್ಯೋತಿಷ್ಯ, ವೇದಾಂತಗಳಲ್ಲಿ ಅವರಿಗಿದ್ದ ಅಪಾರ ಜ್ಞಾನವನ್ನು ಹೊರಸೂಸುತ್ತವೆ. ಭಕ್ತಿ, ವಿರಕ್ತಿ ಮತ್ತು ಗಾಂಭೀರ್ಯಗಳಿಂದ ಕೂಡಿ, ಸಂಗೀತಕ್ಕೆ ತಕ್ಕ ಸಾಹಿತ್ಯ, ಸಾಹಿತ್ಯಕ್ಕೆ ತಕ್ಕ ರಾಗ ಜೋಡಣೆ, ಭಾವ, ರಾಗ, ತಾಳಗಳಿಂದ ಒಡಗೂಡಿ ಅವರ ಅದ್ವಿತೀಯ ರಚನಾ ಸಾಮರ್ಥ್ಯವನ್ನು ಪ್ರದರ್ಶಿಸುತ್ತವೆ. ಕೃತಿಗಳಲ್ಲಿ ರಾಗದ ಹೆಸರನ್ನು ಬಹಳ ಅರ್ಥಗರ್ಭಿತವಾಗಿ ಸಾಹಿತ್ಯದಲ್ಲಿ ಹೊಂದಿಸಿರುವುದು ದೀಕ್ಷಿತರ ಒಂದು ಹಿರಿಮೆ. ಕ್ಷೇತ್ರ ಕೃತಿಗಳಲ್ಲಿ ಮತ್ತು ನವಗ್ರಹ ಕೃತಿಗಳಲ್ಲಿ ಆಯಾಯ ಕ್ಷೇತ್ರಕ್ಕೆ ಸಂಬಂಧಪಟ್ಟ ಅಂಶಗಳಾದ ಪೌರಾಣಿಕತೆ, ಸ್ಥಳ ಮಹಿಮೆ, ತೀರ್ಥಗಳು ಇತ್ಯಾದಿ, ಪ್ರತಿಗ್ರಹಗಳ ಪರಿಚಯ, ಸ್ಥಾನ, ಗ್ರಹಗಳ ಪ್ರಭಾವ ಇತ್ಯಾದಿಗಳನ್ನು ಅತ್ಯಂತ ಸ್ವಾರಸ್ಯವಾಗಿ ವಿವರಿಸಿದ್ದಾರೆ. ಅನೇಕ ಕೃತಿಗಳಲ್ಲಿ ಯತಿ ಮತ್ತು ಪ್ರಾಸವನ್ನು ಸೊಗಸಾದ ಪದಜೋಡಣೆಯಿಂದ, ಅರ್ಥಕ್ಕೆ ಕುಂದು ಬರದಂತೆ ಪ್ರಯೋಗಿಸಿದ್ದಾರೆ. ಸಮಷ್ಟಿಚರಣಗಳಿರುವ ಅನೇಕ ಚಿಕ್ಕ ಕೃತಿಗಳನ್ನು ರಚಿಸಿದ್ದಾರೆ. ಇವೆಲ್ಲವೂ ದೀಕ್ಷಿತರ ಸಂಗೀತ, ಸಾಹಿತ್ಯ, ಸಂಸ್ಕೃತ ಮತ್ತು ವ್ಯಾಕರಣಗಳ ಅಪಾರ ಪಾಂಡಿತ್ಯದ ದ್ಯೋತಕವಾಗಿವೆ.

## ಸ್ವಾತಿ ತಿರುನಾಳ್

(ಕ್ರಿ. ಶ. 1813-1846)



ಹತ್ತೊಂಭತ್ತನೆಯ ಶತಮಾನವು ಕರ್ನಾಟಕ ಸಂಗೀತದ ಸ್ವರ್ಣಯುಗವೆನಿಸಿದೆ. ಸಂಗೀತ ತ್ರಿಮೂರ್ತಿಗಳು ಮತ್ತು ಅವರ ಶಿಷ್ಯ ಸಮುದಾಯವು ಈ ಕಾಲದಲ್ಲಿ ಸಂಗೀತಕ್ಕೆ ಸಲ್ಲಿಸಿದ ಸೇವೆ ಅಪಾರ. ಈ ಕಲಾಸೇವೆಯು ರಾಜರಿಂದಲೂ ನಡೆಯಿತು. ಅವರಲ್ಲಿ ಒಬ್ಬರು ಸ್ವಾತಿ ತಿರುನಾಳ್.

ಪದ್ಮನಾಭ ಸ್ವಾಮಿಯ ಅನುಗ್ರಹದಿಂದ ಚೈತ್ರಮಾಸದ ಸ್ವಾತಿ ನಕ್ಷತ್ರದಲ್ಲಿ ಅಂದರೆ 1813ನೇ ಇಸವಿ ಏಪ್ರಿಲ್ 16ರಂದು ಸ್ವಾತಿ ತಿರುನಾಳ್ ಜನಿಸಿದರು. ಕುಲಶೇಖರ ಪೆರುಮಾಳ್ ಎಂದು ಇನ್ನೊಂದು ಹೆಸರು. ಸಂಸ್ಕೃತ, ಮಲೆಯಾಳ, ಇಂಗ್ಲೀಷ್, ತೆಲುಗು, ಕನ್ನಡ, ಮರಾಠಿ, ಹಿಂದೂಸ್ಥಾನಿ, ಪರ್ಷಿಯನ್ ಮುಂತಾಗಿ ಹದಿಮೂರು ಭಾಷೆಗಳಲ್ಲಿ ಪರಿಣಿತರಾದರು. ಕವಿತಾ ಸಾಮರ್ಥ್ಯ ಪಡೆದರು. ಇದಲ್ಲದೆ ಸಂಗೀತ, ಶಿಲ್ಪ, ಚಿತ್ರ, ಮಾಂತ್ರಿಕ, ಮಲ್ಲಯುದ್ಧದಲ್ಲೂ ಪರಿಶ್ರಮ ಹೊಂದಿದ್ದರು.

ಹದಿನಾರನೆಯ ವಯಸ್ಸಿಗೆ ಪಟ್ಟಾಭಿಷಿಕ್ತರಾಗಿ ಅಧಿಕಾರವನ್ನು ವಹಿಸಿಕೊಂಡರು. ತಮಿಳು, ತೆಲುಗು, ಹಿಂದೂಸ್ತಾನಿ, ಕನ್ನಡ ಮತ್ತು ಮರಾಠಿ ಭಾಷೆಯ ವಿದ್ವಾಂಸರನ್ನು ಆಸ್ಥಾನ ವಿದ್ವಾಂಸರನ್ನಾಗಿ ನೇಮಕ ಮಾಡಿಕೊಂಡರು. ಪರಮೇಶ್ವರ ಭಾಗವತರ್, ಕನ್ನಯ್ಯ ಭಾಗವತರ್, ಪೊನ್ನಯ್ಯ, ಚಿನ್ನಯ್ಯ, ವಡಿವೇಲು, ಶಿವಾನಂದಂ, ರವಿವರ್ಮನ್ ತಂಬಿ, ಹಿಂದೂಸ್ಥಾನಿ ಸಂಗೀತಗಾರರಾದ ಕೋಕಿಲಕಂಠ ಮೇರು ಗೋಸ್ವಾಮಿ ಮುಂತಾದವರು ಇವರ ಆಸ್ಥಾನವನ್ನು ಅಲಂಕರಿಸಿದ್ದರು. ಷಟ್ಕಾಲ ಗೋವಿಂದಮಾರಾರರೂ ಆಗಾಗ್ಗೆ ಆಸ್ಥಾನಕ್ಕೆ ಬಂದು ಹಾಡುತ್ತಿದ್ದರು. ಮಹಾರಾಜರೇ ಸ್ವರಬತ್ ವಾದ್ಯವನ್ನು ನುಡಿಸುತ್ತಿದ್ದರು. ಆಸಕ್ತಿಯುಳ್ಳ ವಿದ್ಯಾರ್ಥಿಗಳಿಗೆ ಮಹಾರಾಜರೇ ವಿದ್ಯೆಯನ್ನು ಕಲಿಯಲು ಅವಕಾಶ ಕಲ್ಪಿಸುತ್ತಿದ್ದರು. ಸ್ವಾತಿ ತಿರುನಾಳರು ಉತ್ತಮ ಆಡಳಿತಗಾರರಾಗಿದ್ದರು.

ಇವರ ರಚನೆಗಳು ಹಲವು ಪ್ರಾಕಾರದಿಂದ ಕೂಡಿವೆ. ಸಂಸ್ಕೃತದಲ್ಲಿ ಅಜಾಮಿಳೋಪಾಖ್ಯಾನ, ಕುಚೇಲೋಪಾಖ್ಯಾನ, ಮಲೆಯಾಳದಲ್ಲಿ ಸಂಗೀತದ ಛಂದಸ್ಸನ್ನು ಕುರಿತ ಒಂದು ಗ್ರಂಥ, ಸ್ತೋತ್ರರೂಪದಲ್ಲಿ ಭಕ್ತಿ ಮಂಜರಿ, ಕಾವ್ಯರೂಪದಲ್ಲಿ ಸಾನಂದೂರ (ತಿರುವನಂತಪುರ) ವರ್ಣನಾ ಪ್ರಬಂಧ ಮತ್ತು ಪದ್ಮನಾಭ ಶತಕ - ಇವರಿಂದ ಸಂಗೀತ ಕ್ಷೇತ್ರಕ್ಕೆ ಸಂದಿರುವ ಸಿರಿ.

ಸ್ವಾತಿ ತಿರುನಾಳರಿಗೆ ಕರ್ನಾಟಕ ಮತ್ತು ಹಿಂದೂಸ್ಥಾನಿ ಸಂಗೀತ ಪದ್ಧತಿಗಳೆರಡರಲ್ಲೂ ಪರಿಶ್ರಮವಿದ್ದಿತು. ಎರಡು ಪದ್ಧತಿಗಳಲ್ಲೂ ಕಂಡುಬರುವ ವಿವಿಧ ರಚನೆಗಳನ್ನು ಪದ್ಮನಾಭ ಅಂಕಿತವನ್ನಿಟ್ಟು ರಚಿಸಿದ್ದಾರೆ. ಪರ್ಯಾಯ ಮುದ್ರೆಗಳಾದ ಜಲಜನಾಭ, ಕಂಜನಾಭ, ಸರಸಿಜನಾಭ, ಕಮಲನಾಭ, ಸರಸೀರುಹನಾಭ, ಎಂಬ ಮುದ್ರೆಗಳನ್ನೂ ಇವರ ರಚನೆಯಲ್ಲಿ ಕಾಣುತ್ತೇವೆ. ರಚನೆಗಳಲ್ಲಿ ಬಳಸಿರುವ ಭಾಷೆ ಸಂಸ್ಕೃತ, ತೆಲುಗು, ಮಲೆಯಾಳ, ತಮಿಳು, ಕನ್ನಡ ಮತ್ತು ಹಿಂದೂಸ್ಥಾನಿ. ಮುನ್ನೂರಕ್ಕೂ ಮೇಲ್ಪಟ್ಟ ಇವರ ರಚನೆಗಳು ಕರ್ನಾಟಕ ಸಂಗೀತದ ಸ್ವರಜತಿ, ವರ್ಣ, ಪದವರ್ಣ, ಕೃತಿ, ಪದ, ಜಾವಳಿ, ತಿಲ್ಲಾನ, ರಾಗಮಾಲಿಕೆಗಳನ್ನೂ ಹಿಂದೂಸ್ಥಾನಿ ಪದ್ಧತಿಯ ಧ್ರುಪದ್, ಧಮಾರ್, ಖ್ಯಾಲ್, ಟಪ್ಪಾ, ಠುಮ್ರಿಗಳನ್ನು ಒಳಗೊಂಡಿದೆ. ಇವಲ್ಲದೆ ಮರಾಠಿ ರಚನೆಗಳನ್ನೂ ರಚಿಸಿದ್ದಾರೆ. ಕಲಾಸೇವೆ ಮಾಡುತ್ತಾ ಪುಷ್ಯ ಶುಕ್ಲ ಅಷ್ಟಮಿಯಂದು ಅಂದರೆ 25ನೇ ಡಿಸೆಂಬರ್ 1846 ರಲ್ಲಿ ಪದ್ಮನಾಭನಲ್ಲಿ ಲೀನರಾದರು.

## ಮೈಸೂರು ಸದಾಶಿವರಾವ್

(ಕ್ರಿ.ಶ. 1815 - 1894)



ತ್ಯಾಗರಾಜರ ಸಮ್ಮುಖದಲ್ಲಿ ತಮ್ಮ ಸ್ವಂತ ರಚನೆಯಾದ ತೋಡಿ ರಾಗದ ತ್ಯಾಗರಾಜ ಸ್ವಾಮಿ ವೆಡಲಿನ ಕೃತಿಯನ್ನು ಹಾಡಿ ಅವರಿಂದ ಮೆಚ್ಚುಗೆಯನ್ನೂ ಆಶೀರ್ವಾದವನ್ನೂ ಪಡೆದ ಶ್ರೇಷ್ಠ ವಾಗ್ಗೇಯಕಾರರು ಸದಾಶಿವರಾಯರು. ತ್ಯಾಗರಾಜರ ಶಿಷ್ಯರಾದ ವಾಲಾಜಪೇಟೆ ವೆಂಕಟರಮಣ ಭಾಗವತರ ಶಿಷ್ಯರಾಗಿ ತ್ಯಾಗರಾಜರ ಪ್ರಶಿಷ್ಯರಾಗಿದ್ದಾರೆ.

ಆಂಧ್ರದ ಚಿತ್ತೂರಿನ ಸಮೀಪದಲ್ಲಿರುವ ಗಿರಂಪೇಟೆಯಲ್ಲಿ 1815 ರಲ್ಲಿ ಸದಾಶಿವರಾಯರು ಜನಿಸಿದರು. ತಂದೆ ಹುಜೂರು ಶಿರಸ್ತೇದಾರ್ ಶಂಕರರಾವ್, ತಾಯಿ ಕೃಷ್ಣಾಬಾಯಿ, ಅಶ್ವಲಾಯನ ಸೂತ್ರ, ಜಮದಗ್ನಿ ಗೋತ್ರಕ್ಕೆ ಸೇರಿದ ಮಾಧ್ವ ಬ್ರಾಹ್ಮಣರು.

ಬಾಲ್ಯದಲ್ಲಿ ವಿದ್ಯಾಭ್ಯಾಸ ಮಾಡಿ, ತಾಯಿಯ ಮೇಲೆ ಕೋಪಗೊಂಡು ಮನೆಯನ್ನು ಬಿಟ್ಟು ವಾಲಾಜಪೇಟೆ ವೆಂಕಟರಮಣ ಭಾಗವತರಲ್ಲಿ ಶಿಷ್ಯವೃತ್ತಿ ಮಾಡಿ ಸಂಗೀತ ಲಕ್ಷ್ಯ ಲಕ್ಷಣಗಳೆರಡರಲ್ಲೂ ಪ್ರವೀಣರಾದರು. ಆರಣಿಯ ಜಹಗೀರ್‌ದಾರರ ಸೋದರತ್ತೆ ಸುಂದರಾಬಾಯಿಯೊಡನೆ ವಿವಾಹವಾಯಿತು.

ಸದಾಶಿವರಾಯರ ಸಂಗೀತವನ್ನು ಮೆಚ್ಚಿ ವೀಣಾಸಾಂಬಯ್ಯನವರು ಇವರನ್ನು ಮೈಸೂರು ಆಸ್ಥಾನಕ್ಕೆ ಕರೆತಂದರು. ಐವತ್ತು ರೂಪಾಯಿಗಳ ಸಂಭಾವನೆಕೊಟ್ಟು ಮುಮ್ಮಡಿ ಕೃಷ್ಣರಾಜ ಒಡೆಯರು ರಾಯರನ್ನು ಆಸ್ಥಾನ ವಿದ್ವಾಂಸರನ್ನಾಗಿ ನೇಮಿಸಿದರು. ಮನಸ್ತಾಪವೇರ್ಪಟ್ಟು ಮತ್ತೆ ತಮ್ಮ ಊರಿಗೆ ಮರಳಿದರು. ದಿವಾನ್ ವೆಂಕಟೇ ಅರಸುರವರು ಚಾಮರಾಜ ಒಡೆಯರ ಕಾಲದಲ್ಲಿ ಮತ್ತೆ ರಾಯರನ್ನು ಆಸ್ಥಾನವಿದ್ವಾಂಸರನ್ನಾಗಿ ನೇಮಕ ಮಾಡಿಸಿದರು. ಮೈಸೂರಿನಲ್ಲೇ ನೆಲಸಿದ ರಾಯರು **ಮೈಸೂರು ಸದಾಶಿವರಾಯ**ರೆನಿಸಿದರು.

ದಕ್ಷಿಣ ಭಾರತದ ಅನೇಕ ಪ್ರಸಿದ್ಧ ಕ್ಷೇತ್ರಗಳನ್ನು ಸಂದರ್ಶಿಸಿ, **ಸದಾಶಿವ** ಎಂಬ ಅಂಕಿತದಿಂದ ನೂರಾರು ಕೃತಿಗಳನ್ನು ರಚಿಸಿದ್ದಾರೆ. ಇದರಲ್ಲಿ ಸ್ವರಜತಿ, ತಾನವರ್ಣ, ಪದವರ್ಣ, ಕೃತಿ, ರಾಗಮಾಲಿಕೆ, ತಿಲ್ಲಾನಗಳು ಸೇರಿವೆ. ಇವರು ನರಸಿಂಹೋಪಾಸಕರು. ಇವರ ರಚನೆಗಳು ತೆಲುಗು, ಮತ್ತು ಸಂಸ್ಕೃತ ಭಾಷೆಗಳಲ್ಲಿದ್ದು ರೂಪಕ, ಆದಿ, ಮಿಶ್ರ ಝಂಪೆ, ಚತುರಶ್ರ ಮಠ್ಯ, ತಿಶ್ರ ಏಕ ಮತ್ತು ಚೌ ತಾಲದಲ್ಲಿವೆ. ಚೌತಾಳದಲ್ಲಿರುವ ಲಲಿತ ರಾಗದ ಕಮಲಾಕಾಂತ ಕೃತಿಯನ್ನು ಹಾಡುತ್ತಾ ಎಂಭತ್ತನೇ ವಯಸ್ಸಿನಲ್ಲಿ ನಾದಬ್ರಹ್ಮನಲ್ಲಿ ಲೀನರಾದರೆಂದು ಪ್ರತೀತಿ. ಆಗ ಮನೆಯಲ್ಲಿದ್ದ ತಂಬೂರಿ ಮೊದಲಾದ ವಾದ್ಯಗಳು ತಮ್ಮಷ್ಟಕ್ಕೆ ತಾವೇ ನಾದ ಮಾಡಿದವಂತೆ.

## ಮಹಾ ವೈದ್ಯನಾಥ ಅಯ್ಯರ್ (ಕ್ರಿ. ಶ. 1844-1893)

ತ್ಯಾಗರಾಜರ ಶಿಷ್ಯಪರಂಪರೆಗೆ ಸೇರಿದ ಮಹಾವೈದ್ಯನಾಥಯ್ಯರ್ ಹನ್ನೆರಡನೆಯ ವಯಸ್ಸಿಗೇ ಪಂಡಾರು ಸನ್ನಿಧಿಯ ಮಠಾಧಿಪತಿಗಳಿಂದ ಮಹಾ ಎಂಬ ಬಿರುದನ್ನು ಪಡೆದವರು. ಉತ್ತಮ ಗಾಯಕರು, ಪಲ್ಲವಿಯ ನಿರೂಪಣೆಯಲ್ಲಿ ನಿಪುಣರು. ಗಂಧರ್ವ ಗಾನಕ್ಕೆ ಸಮನಾದ ಇವರ ಗಾನವು ಸಹಸ್ರಾರು ಶ್ರೋತೃಗಳನ್ನು ಆನಂದಪರವಶರನ್ನಾಗಿ ಮಾಡುತ್ತಿತ್ತು.



ತಂಜಾವೂರಿನ ಸಮೀಪವಿರುವ ವೈಯಚ್ಚೇರಿಯಲ್ಲಿ ಪಂಚನದ ಅಯ್ಯರ್‌ರವರ ಪುತ್ರರಾಗಿ ವೈದ್ಯನಾಥರು 1844ರಲ್ಲಿ ಜನಿಸಿದರು. ಕೌಂಡಿನ್ಯಗೋತ್ರ. ತಂದೆ ಉತ್ತಮ ಗಾಯಕರು. ತ್ಯಾಗರಾಜರಿಂದ ಆಶೀರ್ವಾದವನ್ನು ಪಡೆದಿದ್ದರು. ಅಣ್ಣ ರಾಮಸ್ವಾಮಿ ಶಿವನ್, ಪಂಡಿತರು.

ವೈದ್ಯನಾಥನ ಸಂಗೀತ ಶಿಕ್ಷಣವು ವಾಗ್ಗೇಯಕಾರ ಆನಯ್ಯನವರಲ್ಲಿ ಪ್ರಾರಂಭವಾಗಿ ಮಾನಂಬು ಚಾವಡಿ ವೆಂಕಟಸುಬ್ಬಯ್ಯರ್ ಅವರಲ್ಲಿ ಮುಂದುವರಿಯಿತು. ಪಟ್ಣಂ ಸುಬ್ರಹ್ಮಣ್ಯ ಅಯ್ಯರ್‌ರವರ ಸಹಪಾಠಿಯಾದರು. ವೈದ್ಯನಾಥ ಏಳನೆಯ ವಯಸ್ಸಿಗೇ ರಾಗಾಲಾಪನೆಯಲ್ಲಿ ನಿಸ್ಸೀಮರೆನಿಸಿ ಹತ್ತನೆಯ ವಯಸ್ಸಿಗೆ ಅಣ್ಣನೊಡನೆ ಸಂಗೀತ ಕಛೇರಿ ಮಾಡುತ್ತಿದ್ದರು. ಅನೇಕ ಸಂಸ್ಥಾನಗಳಲ್ಲಿ ಹಾಡಿ ಸನ್ಮಾನಗಳನ್ನು ಪಡೆದರು. ಸಹೋದರರಿಬ್ಬರೂ ಸೇರಿ ಕಥಾ ಕಾಲಕ್ಷೇಪವನ್ನೂ ಮಾಡುತ್ತಿದ್ದರು. ವೈದ್ಯನಾಥ ಸಂಗೀತ ಭಾಗವನ್ನೂ ರಾಮಸ್ವಾಮಿಯು ನಿರೂಪಣಾ ಭಾಗವನ್ನೂ ಹಂಚಿಕೊಳ್ಳುತ್ತಿದ್ದರು.

ಮೂರು ಸ್ಥಾಯಿಗಳಲ್ಲೂ ಸುಲಭವಾಗಿ ಸಂಚರಿಸುವ ದ್ರುತಗತಿಯ ಸ್ಪಷ್ಟವಾದ ನುಡಿಕಾರವುಳ್ಳ ಶಾರೀರ ಇವರದು. ಐದನೇ ಶ್ರುತಿಯಲ್ಲಿ ಹಾಡಿ ಶ್ರೋತೃಗಳನ್ನು ಮೋಡಿ ಮಾಡುತ್ತಿದ್ದರು. ಇಂತಹ ಶಾರೀರವನ್ನು ಕಾಪಾಡಿಕೊಳ್ಳಲು ಮಿತಭಾಷಿಯಾದರು. ಮಿತಾಹಾರಿಯಾದರು. ಮಾತನಾಡುವಾಗ ನಾದಮಯವಾಗಿ ಆಡಿ ತಮ್ಮ ಶ್ರುತಿಯ ಕಡೆಗೆ ಗಮನವೀಯುತ್ತಿದ್ದರು.

ಬಾಲ್ಯದಿಂದಲೇ ಸಂಗೀತ ಕಾರ್ಯಕ್ರಮಗಳನ್ನು ಕೊಡಲು ಪ್ರಾರಂಭಿಸಿದ್ದರಿಂದ ಹೆಚ್ಚು ಕೃತಿಗಳನ್ನು ಅಭ್ಯಾಸ ಮಾಡಲಾಗಲಿಲ್ಲ. ಮನೋಧರ್ಮಕ್ಕೆ ಪ್ರಾಶಸ್ತ್ಯ ಕೊಟ್ಟು ರಾಗ, ತಾನ, ಪಲ್ಲವಿಯನ್ನು ವಿಶದವಾಗಿ ಹಾಡುತ್ತಿದ್ದರು. ನಾರಾಯಣಗೌಳ ರಾಗದಲ್ಲಿ ಪಲ್ಲವಿಯನ್ನು ಹಾಡಿದ್ದರು.

ಉಚ್ಛಿಷ್ಟ ಗಣಪತಿಯ ಉಪಾಸಕರಾದ ಮಹಾವೈದ್ಯನಾಥ ಅಯ್ಯರ್ ನಿಷ್ಠಾವಂತರು. ಶಿವಪೂಜೆ ಮಾಡುವಾಗ ತೇವಾರದ ಒಂದು ಪಾಶುರ (ಪದ್ಯ)ವನ್ನು ತಪ್ಪದೇ ಹಾಡುತ್ತಿದ್ದರು. ತ್ರಿಕಾಲ ಗಾಯತ್ರಿಯಲ್ಲಿ ನಂಬಿಕೆ. ಸಂಗೀತ ಕಛೇರಿಯ ಮಧ್ಯದಲ್ಲಿ ವಿರಾಮವಿತ್ತು ಸಂಧ್ಯಾವಂದನೆ ಮಾಡುತ್ತಿದ್ದರು. ಶಿಷ್ಯರಿಂದ ತಂಬೂರಿ ನಾದ ಸಾಗುತ್ತಿತ್ತು.

**ಗುರುದಾಸ**ನೆಂಬ ಅಂಕಿತದಿಂದ ಸಂಗೀತ ರಚನೆಗಳನ್ನು ರಚಿಸಿದ್ದಾರೆ. ಪ್ರಸಿದ್ಧವಾದುದು ಎಪ್ಪತ್ತೆರಡು ಮೇಳರಾಗಮಾಲಿಕೆ. ಸಿಂಹನಂದನ ತಾಳದಲ್ಲಿ ತಿಲ್ಲಾನವನ್ನು ರಚಿಸಿದ್ದಾರೆ. ಹಂಸಧ್ವನಿ ರಾಗದ ವಾತಾಪಿಗಣಪತಿಂ ಕೃತಿಗೆ ಸಂಗತಿಗಳನ್ನು ಸಂಯೋಜಿಸಿ ರೂಢಿಗೆ ತಂದವರಿವರು. ಸಹೋದರರಿಬ್ಬರೂ ಸೇರಿ ರಚಿಸಿರುವ ಪೆರಿಯಪುರಾಣ ಕೀರ್ತನೆಗಳು, ಅರವತ್ತಮೂರು ನಾಯಮ್‌ನಾರ್ (ಶೈವ ಸಂತರು) ಅವರ ಚರಿತ್ರೆಯನ್ನು ತಿಳಿಸುತ್ತದೆ.

## ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ (ಕ್ರಿ. ಶ. 1845 - 1902)

ಸಂಗೀತ ಪ್ರೇಮಿಗಳಿಗೆ ಮೆಚ್ಚಿಗೆಯಾದ **ರಘುವಂಶ ಸುಧಾಂಬುಧಿ ಚಂದ್ರಶ್ರೀ** ಎಂಬ ಕೃತಿಯನ್ನು ಇದರ ರಾಗವಾದ ಕದನ ಕುತೂಹಲವನ್ನು ರಚಿಸಿದ ಪ್ರಸಿದ್ಧ ವಾಗ್ಗೇಯಕಾರರೇ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್. ಪ್ರಸಿದ್ಧ ವಾಗ್ಗೇಯಕಾರರು, ಗಾಯಕರು, ಲಕ್ಷ್ಯಲಕ್ಷಣ ಪಂಡಿತರು. ಸಂಸ್ಕೃತ ಮತ್ತು ತೆಲುಗು ಭಾಷೆಗಳಲ್ಲಿ ಪಾಂಡಿತ್ಯ. ಮಾನಂಬುಚಾವಡಿ ವೆಂಕಟ ಸುಬ್ಬಯ್ಯರ್‌ರವರ ಶಿಷ್ಯರಾಗಿ ಮೆರೆದಿದ್ದಾರೆ, ಪಟ್ಣಂರವರು.



ಕ್ರಿ.ಶ. 1845ರಲ್ಲಿ ಜನನ. ತಂದೆ ಭರತಂ ವೈದ್ಯನಾಥ ಅಯ್ಯರ್. ಮೆಲಟ್ಟೂರ್ ಗಣಪತಿ ಶಾಸ್ತ್ರಿಗಳು ಇವರ ಸೋದರಮಾವ ಹಾಗೂ ಪ್ರಥಮಗುರು. ಇವರದು ಸಾಧನೆಯ ಶಾರೀರ. ಮೂವತ್ತೆರಡನೆಯ ವಯಸ್ಸಿನಲ್ಲಿ ವಿವಾಹದ ನಂತರ ತಿರುವಯ್ಯಾರ್‌ಗೆ ಬಂದು ನೆಲಸಿ ಗಾಯಕ ಜೀವನವನ್ನು ಪ್ರಾರಂಭಿಸಿದರು.

ತಾನದಲ್ಲಿ ಅದರಲ್ಲೂ ನಾಭಿತಾನವನ್ನು ಹಾಡುವುದರಲ್ಲಿ ನಿಸ್ಸೀಮರು. ಅಪರೂಪ ಮತ್ತು ಕ್ಲಿಷ್ಟವಾದ ರಾಗವನ್ನು ಸರಳವಾಗಿಯೂ, ವಿಸ್ತಾರವಾಗಿಯೂ ಹಾಡುತ್ತಿದ್ದರು. ಇವರು ಹಾಡಿದ ಬೇಗಡೆ ರಾಗವನ್ನು ಕೇಳಿ ಮೆಚ್ಚಿ ಮೈಸೂರು ಸದಾಶಿವರಾಯರು ಇವರನ್ನು ಬೇಗಡೆ ಸುಬ್ರಹ್ಮಣ್ಯಯ್ಯರ್ ಎಂದು ಕರೆದರು. ಸಿಂಹನಂದನ ತಾಳದಲ್ಲಿ ಪಲ್ಲವಿಯನ್ನು ಹಾಡಿ ಮೆಚ್ಚುಗೆ ಪಡೆದಿದ್ದರು. ಮೈಸೂರು ಆಸ್ಥಾನದಲ್ಲಿ ಕನ್ನಡ ಗೌಳ ರಾಗದಲ್ಲಿ ರಾಗ, ತಾನ, ಪಲ್ಲವಿಯನ್ನು ಹಾಡಿ ತೋಡವನ್ನು ಪಡೆದು ಆಸ್ಥಾನ ವಿದ್ವಾಂಸರೆನಿಸಿ ವರ್ಷಾಸನವನ್ನು ಪಡೆದರು. ವಿಜಯನಗರ, ತಿರುವಾಂಕೂರು, ರಾಮನಾಥಪುರದಲ್ಲೂ ಆಸ್ಥಾನ ವಿದ್ವಾಂಸರಾಗಿ ವರ್ಷಾಸನವನ್ನು ಪಡೆದರು.

**ವೆಂಕಟೇಶ** ಎಂಬ ಮುದ್ರೆಯೊಡನೆ ತಾನ ವರ್ಣ, ಪದ ವರ್ಣ, ಕೃತಿ, ತಿಲ್ಲಾನ, ಜಾವಳಿಗಳನ್ನು ಸಂಸ್ಕೃತ, ತೆಲುಗು ಮತ್ತು ತಮಿಳು ಭಾಷೆಯಲ್ಲಿ ರಚಿಸಿದ್ದಾರೆ. ಚಿಟ್ಟೇಸ್ವರವನ್ನು ರಚಿಸುವುದರಲ್ಲಿ ನಿಸ್ಸೀಮರು. ಅನೇಕ ಅಪರೂಪ ರಾಗಗಳಲ್ಲೂ ಕೃತಿ ರಚನೆ ಮಾಡಿದ್ದಾರೆ. ಐವತ್ತೆಂಟು ವರ್ಷಗಳ ಕಾಲ ಜೀವಿಸಿದ್ದು 1902 ಜುಲೈ 31ರಂದು ದೈವಾಧೀನರಾದರು. ಸಂಗೀತ ರಚನೆಗಳ ಮೂಲಕ ಕರ್ನಾಟಕ ಸಂಗೀತ ಪ್ರಪಂಚದಲ್ಲಿ ಕಂಗೊಳಿಸುತ್ತಿದ್ದಾರೆ.

## ವೀಣೆ ಶೇಷಣ್ಣ (ಕ್ರಿ. ಶ. 1852 - 1926)



ಭಗವತಿ ಸರಸ್ವತಿಯು ಕರಗಳಲ್ಲಿ ಶೋಭಿಸುತ್ತಿರುವ ವೀಣೆಯು ನಾದವನ್ನು ಭಾರತಾದ್ಯಂತ ಹರಡಿ, ಇಟಲಿಯ ಸಂಗೀತಜ್ಞೆಯನ್ನೂ, ಜಾರ್ಜ್ ಚಕ್ರವರ್ತಿಯನ್ನೂ ಮೆಚ್ಚಿಸಿ, **ವೀಣೆಯು ಬೆಡಗಿದು ಮೈಸೂರು** ಎಂಬ ಹೇಳಿಕೆಯನ್ನು ಸಾರ್ಥಕಗೊಳಿಸಿದವರು ವೀಣೆಶೇಷಣ್ಣ. ಮೈಸೂರು ಸಂಸ್ಥಾನದ ಆಸ್ಥಾನ ವಿದ್ವಾಂಸರಾಗಿ, ರಾಜರ ಗುರುಗಳಾಗಿ ಕನ್ನಡಿಗರ ಹೆಮ್ಮೆಯ ವೈಣಿಕರಾಗಿ ವಿಜೃಂಭಿಸಿದವರಿವರು.

ಶೇಷಣ್ಣನವರದು ಸಂಗೀತ ಮನೆತನ. ಭೈರವಿ ರಾಗದ ಅಟತಾಳದ ವಿರಿಬೋಣಿ ವರ್ಣದ ಕತೃ ಪಚ್ಚಿಮರಿ ಆದೆಪ್ಪಯ್ಯನವರ ವಂಶಜರು. ತಂದೆಯ ತಂದೆ ಸೋಮಣ್ಣ, ಶರಭೋಜ ಮಹಾರಾಜರ ಆಸ್ಥಾನ ವಿದ್ವಾಂಸರಾಗಿದ್ದರು. 1838ರಲ್ಲಿ ತಂಜಾವೂರನ್ನು ಬಿಟ್ಟು ಚಿಕ್ಕರಾಮಪ್ಪನವರು ಮೈಸೂರಿಗೆ ಬಂದು ಆಸ್ಥಾನ ವಿದ್ವಾಂಸರಾದರು. ಚಿಕ್ಕರಾಮಪ್ಪನವರ ಕಿರಿಯ ಮಗ ಶೇಷಣ್ಣ.

1852ನೇ ಇಸವಿ, ವಿರೋಧಿಕೃತ್ ಸಂವತ್ಸರದ ಕಾರ್ತೀಕ ಬಹುಳ ಪಂಚಮಿಯಂದು ಶೇಷಣ್ಣ ಜನಿಸಿದರು. ಶ್ರೀವತ್ಸಗೋತ್ರ. ಮಾಧ್ವ ಬ್ರಾಹ್ಮಣರು. ಪ್ರಾರಂಭಿಕ ಶಿಕ್ಷಣ ತಂದೆಯವರಲ್ಲಿ. ಬಾಲಕನದು ಅಸಾಧಾರಣವಾದ ಸ್ವರ, ಲಯ ಜ್ಞಾನ. ಶಿವರಾತ್ರಿ ಸಂದರ್ಭದಲ್ಲಿ ಪರಸ್ಥಳದ ವಿದ್ವಾಂಸರೊಡನೆ ನಡೆದ ಪಲ್ಲವಿ ಸ್ಪರ್ಧೆಯಲ್ಲಿ ಬಾಲಕನಿಗೆ ಜಯ. ಶಾಲುಜೋಡಿ ಮುತ್ತಿನ ಕಂಠಿಹಾರದೊಡನೆ ಮಹಾರಾಜರಿಂದ ಸನ್ಮಾನ.

ಶೇಷಣ್ಣನವರಿಗೆ ಹನ್ನೆರಡನೆಯ ವಯಸ್ಸಿನಲ್ಲಿ ವಿವಾಹ. ಹದಿನಾರು ವಯಸ್ಸಿನಲ್ಲಿ ಪಿತೃವಿಯೋಗ. ದೊಡ್ಡ ಶೇಷಣ್ಣನವರಲ್ಲಿ ವೀಣೆಯ ಪಾಠ. ಮೈಸೂರು ಸದಾಶಿವರಾಯರಲ್ಲಿ ಗಾಯನ ಶಿಕ್ಷಣ. ಬೆಳಗಿನ ಐದು ಗಂಟೆಗೆ ಪ್ರಾರಂಭವಾದ ಸಾಧನೆ ರಾತ್ರಿಯವರೆಗೆ ಅಕ್ಕ ವೆಂಕಮ್ಮನವರ ಮೇಲ್ವಿಚಾರಣೆಯಲ್ಲಿ ನಡೆಯುತ್ತಿತ್ತು. ಹೀಗೆ ಜೀವನವನ್ನೇ ಸಂಗೀತಕ್ಕಾಗಿ ಮುಡುಪಿಟ್ಟರು ಶೇಷಣ್ಣ.

ಹಲವಾರು ವರ್ಷಗಳ ನಂತರ ಕಛೇರಿ ಜೀವನ ಪ್ರಾರಂಭ. ಪರಸ್ಥಳದಲ್ಲಿ ಕಛೇರಿ. ಮೊದಲ ಕಾರ್ಯಕ್ರಮ ಕೊಯಮತ್ತೂರಿನಲ್ಲಿ. ಸಂತೋಷಗೊಂಡ ವ್ಯವಸ್ಥಾಪಕರು ಗೊತ್ತುಪಡಿಸಿದ ಸಂಭಾವನೆಯ ಎರಡರಷ್ಟು ಮೊತ್ತವನ್ನು ಕೊಟ್ಟರು. ದೆಹಲಿಯಲ್ಲಿ ಜಾರ್ಜ್ ಚಕ್ರವರ್ತಿಯ ಪಟ್ಟಾಭಿಷೇಕ ಸಂದರ್ಭದಲ್ಲಿ ಇವರ ವೀಣಾವಾದನ. ತಿರುವಾಂಕೂರು, ರಾಮನಾಥಪುರ, ಬರೋಡ, ಗದ್ವಾಲ್, ಇಂದೋರ್, ಗ್ವಾಲಿಯರ್ ಸಂಸ್ಥಾನಗಳಲ್ಲಿ ಇವರ ಕಛೇರಿ.

ಪುದುಕೋಟೆ ಸಂಸ್ಥಾನದಲ್ಲಿ ಸನ್ಮಾನ. 1920ರಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಪಟ್ಟಕ್ಕೆ ಬಂದ ಮಾರನೆಯ ದಿವಸವೇ ಇವರಿಗೆ ವೈಣಿಕ ಶಿಖಾಮಣಿ ಎಂಬ ಬಿರುದು ಪ್ರದಾನ ಮಾಡಿ ಎರಡು ಕೈಗಳಿಗೂ ತೋಡಗಳನ್ನು ತೊಡಿಸಿದರು. 1924ರಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಐದು ಗಂಟೆಗಳ ಕಾಲ ನುಡಿಸಿ ಗಾಂಧೀಜಿಯವರ ಮನಸ್ಸನ್ನು ಸೂರೆಗೊಂಡರು.

ವೀಣೆ ಮಾತ್ರವಲ್ಲದೆ ಗೋಟುವಾದ್ಯ, ಜಲತರಂಗ್ ವಾದ್ಯಗಳಲ್ಲೂ ಪರಿಶ್ರಮವಿದ್ದಿತು. ಹಲವಾರು ಹಿಂದೂಸ್ಥಾನಿ ವಾದ್ಯಗಳನ್ನು ನುಡಿಸುತ್ತಿದ್ದರು. ಕರ್ನಾಟಕ ಸಂಗೀತಕ್ಕೆ ಮೀಸಲಾದ ರಾಗಗಳಲ್ಲದೆ ಬೇಹಾಗ್, ಹಿಂದೂಸ್ಥಾನಿ ಕಾಪಿ, ಜಂಟಿ ರಾಗಗಳನ್ನು ಅಮೋಘವಾಗಿ ನುಡಿಸುತ್ತಿದ್ದರು. ಶೇಷ ಎಂಬ ಅಂಕಿತದಿಂದ ಅನೇಕ ಜತಿಸ್ವರ, ವರ್ಣ, ಕೃತಿ, ತಿಲ್ಲಾನಗಳನ್ನು ರಚಿಸಿದ್ದಾರೆ. ಕಲಾಸೇವೆ ಮಾಡುತ್ತಾ 74ನೇ ವಯಸ್ಸಿನಲ್ಲಿ 25ನೇ ಜುಲೈ 1926ರಂದು ನಾದಲೋಕವನ್ನು ಸೇರಿದರು.

ಮೈಸೂರಿನಲ್ಲಿ ಕೃಷ್ಣೋತ್ಸವವನ್ನು ಪ್ರಾರಂಭಿಸಿದವರಿವರು. ಅರಮನೆಯ ಭಕ್ಷಿಗಳಾಗಿ, ಪರಸ್ಥಳದ ವಿದ್ವಾಂಸರಿಗೆ ಆಸ್ಥಾನದಲ್ಲಿ ಹಾಡುವ ಅವಕಾಶ ಕಲ್ಪಿಸುತ್ತಿದ್ದರು. ಪ್ರತಿ ಶುಕ್ರವಾರವೂ ಮನೆಯಲ್ಲಿ ಸಂಗೀತ ಕಛೇರಿ ನಡೆಸಿ ಉದಯೋನ್ಮುಖ ಕಲಾವಿದರನ್ನು ಪ್ರೋತ್ಸಾಹಿಸುತ್ತಿದ್ದರು. ವೀಣೆಯಲ್ಲಿ ಮೈಸೂರು ಶೈಲಿಯ ಆದ್ಯ ಪ್ರವರ್ತಕರು. ಮೀಟಿನಲ್ಲಿ ಮಾಧುರ್ಯ, ದಾಟುಸ್ವರಗಳನ್ನು ನುಡಿಸುವ ಕ್ರಮ ಅಪೂರ್ವವಾದುದು.

## ವೀಣೆ ಸುಬ್ಬಣ್ಣ

**(ಕ್ರಿ. ಶ. 1855 - 1939)**

ಗಾಯನ ವೀಣಾವಾದನಗಳೆರಡರಲ್ಲೂ ನಿಪುಣರಾಗಿ, ವೈಣಿಕ ವರಕೇಸರಿ, ವೈಣಿಕ ಪ್ರವೀಣ ಮುಂತಾದ ಬಿರುದುಗಳನ್ನು ಮಹಾರಾಜರಿಂದ ಪಡೆದು, ಮೈಸೂರಿನ ಸಂಗೀತ ಪತಾಕೆಯನ್ನು ಎತ್ತಿ ಹಿಡಿದವರು ವೀಣೆ ಸುಬ್ಬಣ್ಣ. ಯಾವ ಸಂಸ್ಥಾನದಲ್ಲಿ ಇವರ ಕಾರ್ಯಕ್ರಮ ನಡೆಯಲೀ, ಖಿಲ್ಲತ್ತುಗಳನ್ನು ತೆಗೆದುಕೊಂಡು ಹೋಗಿ ಅಲ್ಲಿನ ಮಹಾರಾಜರಿಗೆ ಸಮರ್ಪಿಸುತ್ತಿದ್ದರು.



ವೀಣೆ ಸುಬ್ಬಣ್ಣ 1855ರಲ್ಲಿ ಜನಿಸಿದರು. ತಂದೆ ದೊಡ್ಡ ಶೇಷಣ್ಣನವರು. ಇವರದು ಸಂಗೀತ ಮನೆತನ. ತಾತ ವೀಣೆ ವೆಂಕಟ ಸುಬ್ಬಯ್ಯ. ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನ ವಿದ್ವಾಂಸರು. ಸುಬ್ಬಣ್ಣನವರಿಗೆ ತಂದೆಯವರಿಂದ ವೀಣೆಯ ಪಾಠ. ಮೈಸೂರು ಸದಾಶಿವರಾಯರಲ್ಲಿ ಗಾಯನ ಶಿಕ್ಷಣ. ಮಧುರವಾದ ಶಾರೀರ. ಗಾಯನ, ವಾದನಗಳೆರಡರಲ್ಲೂ ನಿಪುಣರಾಗಿದ್ದು, ವೀಣೆಯೊಡನೆ ಹಾಡುತ್ತಿದ್ದರು. ಚಾಮರಾಜ ಒಡೆಯರು ಪಟ್ಟಕ್ಕೆ ಬಂದೊಡನೆ ಸುಬ್ಬಣ್ಣನವರಿಗೆ ಆಸ್ಥಾನ ವಿದ್ವಾಂಸರ ಪದವಿ ದೊರೆತು ಮಾಸಾಶನವು ಬರುತ್ತಿತ್ತು. ಮಹಾರಾಜರೊಡನೆ ವಿದ್ಯಾಭ್ಯಾಸ ಮಾಡಿದ್ದರಿಂದ ರಾಜರಲ್ಲಿ ಬಹಳ ಸಲಿಗೆ. ವಾರಕ್ಕೆರಡು ಸಲವಾದರೂ ಅರಮನೆಯಲ್ಲಿ ಸುಬ್ಬಣ್ಣನವರ ಗಾಯನ, ಮಹಾರಾಜರ ಪಿಟೀಲು, ಶೇಷಣ್ಣನವರ ವೀಣೆ ಗೋಷ್ಠಿಯು ನಡೆಯುತ್ತಿತ್ತು. ಅರಮನೆಯ ಭಕ್ಷಿಗಳಾದರು ಸುಬ್ಬಣ್ಣ. ರಾಮನಾಥಪುರ, ತಿರುವಾಂಕೂರು, ಪುದುಕೋಟೆ ಸಂಸ್ಥಾನಗಳಲ್ಲಿ ವೀಣಾವಾದನ ನಡೆಸಿ ಸನ್ಮಾನಿತರಾದರು.

ಕಲಾಭಿಮಾನಿಗಳೂ ಉದಾರಿಯೂ ಆಗಿದ್ದ ಸುಬ್ಬಣ್ಣ ಎಂತಹ ಬೆಲೆಬಾಳುವ ವಸ್ತುವನ್ನೂ ಧಾರಾಳವಾಗಿ ದಾನ ಮಾಡುತ್ತಿದ್ದರು. ಮನೆಯಲ್ಲಿ ವಿದ್ವಾಂಸ, ವಿದುಷಿಯರ ಸಂಗೀತವನ್ನು ಏರ್ಪಡಿಸಿ ಅವರನ್ನು ಗೌರವಿಸಿ ಸಂಭಾವನೆ ನೀಡುತ್ತಿದ್ದರು.

**ವೆಂಕಟಸುಬ್ಬ** ಎಂಬ ಅಂಕಿತದೊಡನೆ ಅನೇಕ ಜತಿಸ್ವರ, ವರ್ಣ, ಕೃತಿ ಮತ್ತು ತಿಲ್ಲಾನಗಳನ್ನು ರಚಿಸಿದ್ದಾರೆ. ಮೋಹನ, ಕಾಂಭೋಜಿ, ಕರ್ನಾಟಕ ಕಾಪಿ ಮತ್ತು ಕೀರವಾಣಿ ರಾಗದ ಜತಿಸ್ವರಗಳು, ಅಠಾಣರಾಗದ **ಶ್ರೀನಿವಾಸನನ್ನು** ಎಂಬ ತಾನವರ್ಣವೂ ಅಮೋಘವಾಗಿದೆ. ರಸಿಕ ಶಿಖಾಮಣಿಗಳಾದ ಸುಬ್ಬಣ್ಣನವರು ಸುಗಂಧ ದ್ರವ್ಯಗಳನ್ನು ಧಾರಾಳವಾಗಿ ಬಳಸುತ್ತಿದ್ದರು. ಹಾಸ್ಯಪ್ರಿಯರು. ಉಡುಗೆ ತೊಡುಗೆಗಳಲ್ಲೂ, ಊಟ ಉಪಚಾರದಲ್ಲೂ ರಸಿಕತೆ. ಅಷ್ಟಾಬ್ದಿ ಮಹೋತ್ಸವವನ್ನು ರಸಿಕರಿಗೆ ರಸದೌತಣ ನೀಡಿ ವಿಜೃಂಭಣೆಯಿಂದ ನೆರವೇರಿಸಿ, ಜೀವನದಲ್ಲಿ ಎದುರಾದ ಕಷ್ಟಕಾರ್ಪಣ್ಯಗಳನ್ನು ಶಾಂತಚಿತ್ತರಾಗಿ ಎದುರಿಸಿ, 1939ರಲ್ಲಿ ಸ್ವರ್ಗಸ್ಥರಾದರು.

## ಮೈಸೂರು ವಾಸುದೇವಾಚಾರ್ಯ

(ಕ್ರಿ. ಶ. 1865 - 1961)

ಚಿರನೂತನವಾಗಿ, ಸಂಗೀತ ರಸಿಕರ ಮನಸೆಳೆಯುತ್ತಿರುವ **ಬ್ರೋಚೆವಾರೆವರುರಾ** ಕೃತಿಯ ರಚನಕಾರರೇ ಮೈಸೂರು ವಾಸುದೇವಾಚಾರ್ಯರು. ಹಿಂದಿನ ಮತ್ತು ಇಂದಿನ ಪರಂಪರೆಗೆ ಸೇತುವೆಯಾದವರು. ತಾವು ಕಂಡು ಕೇಳಿದ ಅನುಭವಾಮೃತವನ್ನು ಮುಂದಿನ ಪೀಳಿಗೆಯವರೂ ಸವಿಯುವ ಸಲುವಾಗಿ **ನಾಕಂಡ ಕಲಾವಿದರು** ಎಂಬ ಹೊತ್ತಿಗೆಯಲ್ಲಿ ಕಲಾವಿದರನ್ನು ಆಡು ಭಾಷೆಯಲ್ಲಿ ಸರಳವಾಗಿ ಚಿತ್ರಿಸಿ ಸಂಗೀತ ಪ್ರಪಂಚಕ್ಕೆ ಅಪಾರ ಕೊಡುಗೆಯನ್ನಿತ್ತಿದ್ದಾರೆ.

ವೇದಾಧ್ಯಯನ ಸಂಪನ್ನರಾದ ಸುಬ್ರಹ್ಮಣ್ಯಾಚಾರ್ಯರ ಮೂರನೇ ಪತ್ನಿ ಕೃಷ್ಣಾಬಾಯಿಯವರಿಗೆ 1865ನೇ ಮೇ 28ರಂದು ವಾಸುದೇವಾಚಾರ್ಯರ ಜನನ. ತಂದೆ ಪ್ರವಚನ ಮಾಡುವಾಗ, ಮಗನನ್ನೆತ್ತಿಕೊಂಡಾಗಲೆಲ್ಲಾ ಶ್ಲೋಕಗಳನ್ನು ರಾಗವಾಗಿ ಹಾಡುತ್ತಿದ್ದರು. ವಾಸುದೇವನಿಗೆ ಮೂರು ವರ್ಷದಲ್ಲೇ ಪಿತೃವಿಯೋಗವುಂಟಾಗಿ ತಾಯಿಯ ತಂದೆ



ಗೋಪಾಲಾಚಾರ್ಯರ ಆಶ್ರಯವಾಯಿತು. ಸುಬ್ರಹ್ಮಣ್ಯಾಚಾರ್ಯರಿಗೆ ಅರಮನೆಯಿಂದ ಬರುತ್ತಿದ್ದ ಸಂಬಳದ ಆಧಾರದ ಮೇಲೆ ವಾಸುದೇವನಿಗೆ ಸಂಬಳ ಮಂಜೂರು ಮಾಡಿಸಿಕೊಂಡು ಆ ಹಣದಿಂದ ಸಂಸಾರವು ನಡೆಯುವಂತೆ ಮಾಡಿದರು.

ಇವರದು ವೈದಿಕ ಮನೆತನ. ಮಾಧ್ವ ಬ್ರಾಹ್ಮಣರು. ಪೆರಿಯ ತಿರುಮಲ ಸ್ವಾಮಿಯವರಲ್ಲಿ ಬಾಲಕ ವಾಸುದೇವನಿಗೆ ಸಂಸ್ಕೃತ ಪಾಠ. ಸಂಸ್ಕೃತದಲ್ಲಿ ಪ್ರೌಢ ಶಿಕ್ಷಣಕ್ಕಾಗಿ ಮೈಸೂರು ಮಹಾರಾಜಾ ಸಂಸ್ಕೃತ ಮಹಾಪಾಠಶಾಲೆಗೆ ಸೇರಿಸಿದರು. ವಾಸುದೇವನಿಗೆ ಸಂಗೀತದಲ್ಲಿ ಆಸಕ್ತಿಯಿದ್ದರೂ ತಾತನಿಂದ ಪ್ರೋತ್ಸಾಹ ಸಿಗಲಿಲ್ಲ. ಬಾಲಕನ ಸೋದರಮಾವ ಪದ್ಮನಾಭಾಚಾರ್ಯರ ಸಹಾಯದಿಂದ ಸುಬ್ಬರಾಯರಲ್ಲಿ ಶಿಷ್ಯತ್ವ. ಸ್ವರಜತಿಯ ಹಂತ ತಲುಪಿದ ಕೂಡಲೇ ತಾತನಿಂದ ಕಲಿಕೆಗೆ ವಿಘ್ನವುಂಟಾಯಿತು. ಇವನನ್ನು ಸಾಹಿತ್ಯಾಭ್ಯಾಸಕ್ಕೆ ಸಂಪೂರ್ಣವಾಗಿ ತೊಡಗಿಸಿದರು. ಸಂಸ್ಕೃತ ಕಾಲೇಜಿನಲ್ಲಿ ಸಂಗೀತವು ಅಧ್ಯಯನ ವಿಷಯವಾಗಿದ್ದು ಇವರ ಪಾಲಿಗೆ ವರದಾನವಾಯಿತು. ವೀಣೆ ಪದ್ಮನಾಭಯ್ಯನವರಲ್ಲಿ ಇವರ ಸಂಗೀತಾಭ್ಯಾಸ ಮುಂದುವರಿಯಿತು.

ಒಮ್ಮೆ ವೀಣೆಶೇಷಣ್ಣನವರ ಕಛೇರಿ ಕೊಯಮತ್ತೂರಿನಲ್ಲಿ. ಕಛೇರಿಯಾದ ನಂತರ ವಾಸುದೇವಾಚಾರ್ಯರನ್ನು ಹಾಡಲು ಹೇಳಿದರು. ಸ್ಥಳದಲ್ಲೇ ಆಶುಕವಿತೆಯನ್ನು ಸಂಸ್ಕೃತದಲ್ಲಿ ರಚಿಸಿ ಹಾಡಿ ಶ್ರೋತೃಗಳನ್ನು ಮೆಚ್ಚಿಸಿ ಧನಿಕನಿಂದ ಸನ್ಮಾನ ಪಡೆದರು. ಅಲ್ಲಿಂದ ಹಿಂದಿರುಗಿ ಬರುವಾಗ ರೈಲಿನಲ್ಲೇ ಶಂಕರಾಭರಣ ರಾಗದ ಅಟತಾಳ ವರ್ಣವನ್ನು ಕಂಠಪಾಠ ಮಾಡಿ ಬೆಂಗಳೂರು ನಿಲ್ದಾಣಕ್ಕೆ ಬರುವಷ್ಟರಲ್ಲಿ ವರ್ಣವನ್ನು ವೀಣೆಶೇಷಣ್ಣನವರಿಗೆ ಒಪ್ಪಿಸಿ ಮೆಚ್ಚುಗೆ ಪಡೆದರು.

ಪಟ್ಣಂ ಸುಬ್ರಹ್ಮಣ್ಯ ಅಯ್ಯರ್‌ರವರ ಗಾಯನವನ್ನು ಕೇಳಿ ಅವರನ್ನೇ ತನ್ನ ಗುರುವಾಗಿ ಪಡೆಯಬೇಕೆಂದು ಆಶಿಸಿ ಮಹಾರಾಜರನ್ನು ವಿನಂತಿಸಿಕೊಂಡಾಗ, ಮಹಾರಾಜರು ಪರಿಚಯ ಪತ್ರದೊಡನೆ, ವಿದ್ಯಾರ್ಥಿವೇತನವನ್ನು ಕೊಟ್ಟು ಅವರನ್ನು ಪಟ್ಣಂರವರಲ್ಲಿಗೆ ಕಳುಹಿಸಿಕೊಟ್ಟರು. ಹೀಗೆ ಚಾಮರಾಜ ಒಡೆಯರು ವಾಸುದೇವಾಚಾರ್ಯರು ಕಲಾನಿಧಿಯಾಗಲು ಅನುವು ಮಾಡಿಕೊಟ್ಟರು. ಗುರುಕುಲವಾಸದಲ್ಲಿ ವಾಸುದೇವಾಚಾರ್ಯರು ಆರುವರ್ಷಗಳನ್ನು ಕಳೆದರು. ಸಂಗೀತ ಶಿಕ್ಷಣದೊಡನೆ, ಪಟ್ಣಂ, ಸಂಗೀತ ರಚನೆಗಳನ್ನು ರಚಿಸುವಾಗ ಇವರೊಡನೆ ಚರ್ಚಿಸುತ್ತಿದ್ದರು. ತಿರುವೈಯಾರಿನಿಂದ ಮೈಸೂರಿಗೆ ಹಿಂದಿರುಗಿ ಆಸ್ಥಾನ ವಿದ್ವಾಂಸರಾಗಿ ನೇಮಕಗೊಂಡು ಅರಮನೆಯಿಂದ ಇಪ್ಪತ್ತು ರೂಪಾಯಿ ಸಂಬಳವನ್ನು ಪಡೆಯುತ್ತಿದ್ದರು. ಸರ್ಕಾರಿ ಟ್ರೈನಿಂಗ್ ಕಾಲೇಜಿನಲ್ಲಿ ಅಧ್ಯಾಪನ. ದಳವಾಯ್ಸ್ ಪಾಠಶಾಲೆಯಲ್ಲಿ ವಿದ್ಯಾರ್ಥಿಗಳಿಗೆ ಉಚಿತ ಸಂಸ್ಕೃತಪಾಠ.

ಆಚಾರ್ಯರ ಸಾಧನಕ್ರಮ ಅತಿ ಕಟ್ಟುನಿಟ್ಟಾದುದು. ಬೆಳಗಿನ ಝಾವ ಅಟತಾಳದ ವರ್ಣವನ್ನು ತ್ರಿಕಾಲದಲ್ಲಿ ಹಾಡುತ್ತಿದ್ದರು. ಅದರಲ್ಲೂ ಭೈರವಿ ರಾಗದ ವಿರಿಬೋಣಿಯನ್ನು ತಪ್ಪದೇ ಹಾಡುತ್ತಿದ್ದರು. ನಂತರ ಒಂದು ಹಳೆಯ ಕೃತಿ ಮತ್ತು ಹೊಸಪಾಠ. ಬೆಳಗಿನ ಅಭ್ಯಾಸದಲ್ಲಿ ಗುರುಕುಲದ ಶಿಷ್ಯರಿಗೂ ಪಾಠವಾಗುತ್ತಿತ್ತು. ರಾತ್ರಿ 9-30 ಯಿಂದ ಕಛೇರಿ ಸಾಧನೆ. ಒಂದು ವರ್ಣ, ಎರಡು ಕೃತಿಗಳು ನಂತರ ಸವಿಸ್ತಾರವಾಗಿ ರಾಗ, ತಾನ, ಪಲ್ಲವಿಗಳ ಹಾಡಿಕೆ. ಇದು ಮೂರರಿಂದ ನಾಲ್ಕು ಗಂಟೆಯವರೆಗೂ ಅಥವಾ ಅದಕ್ಕೆ ಹೆಚ್ಚಾಗಿರುತ್ತಿತ್ತು.

ಆಚಾರ್ಯರ ದಿನಚರಿಯಲ್ಲಿ ರಾಮಾಯಣ ಪಾರಾಯಣವು ಒಂದು ಅವಿಭಾಜ್ಯ ಅಂಗವಾಗಿತ್ತು. **ವಾಸುದೇವ** ಅಂಕಿತದೊಡನೆ ತೆಲುಗು, ಸಂಸ್ಕೃತ ಭಾಷೆಗಳಲ್ಲಿ ಜತಿಸ್ವರ, ವರ್ಣ, ಕೃತಿ, ಜಾವಳಿ, ತಿಲ್ಲಾನಗಳನ್ನು ರಚಿಸಿದ್ದಾರೆ.

ಅನೇಕ ಹೊಸರಾಗಗಳನ್ನು ಸೃಷ್ಟಿಸಿ ಅವುಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಸುನಾದವಿನೋದಿನಿಯೂ ಒಂದು. ನವರತ್ನ ರಾಗಮಾಲಿಕೆಯು ಇವರ ಇನ್ನೊಂದು ರಚನೆ. **ವಾಸುದೇವ ಕೀರ್ತನ ಮಂಜರಿ** ಎಂಬ ಎರಡು ಭಾಗಗಳ ಗ್ರಂಥದಲ್ಲಿ ಇವರ ಕೃತಿಗಳು ಪ್ರಕಟವಾಗಿದೆ. ಅವರ ಅಪ್ರಕಟಿತ ಕೃತಿಗಳನ್ನು ಅವರ ಮೊಮ್ಮಗ ಶ್ರೀ ಎಸ್. ಕೃಷ್ಣಮೂರ್ತಿಯವರು ಹೊರತಂದರು. ಕಲಾಕ್ಷೇತ್ರದಲ್ಲಿ ಪ್ರಾಚಾರ್ಯರಾಗಿ ರುಕ್ಮಿಣಿ ಅರುಂಡೇಲ್‌ರವರ ರಾಮಾಯಣ ನೃತ್ಯ ರೂಪಕಕ್ಕೆ ಸಂಗೀತ ಸಂಯೋಜಿಸಿದರು.

ಆಚಾರ್ಯರಿಗೆಸಂದ ಸನ್ಮಾನಗಳು ಬಿರುದುಗಳು ಹಲವಾರು. ಅದರಲ್ಲಿ ಮುಖ್ಯವಾದವು ಮದ್ರಾಸ್ ಮ್ಯೂಸಿಕ್ ಅಕಾಡೆಮಿಯಿಂದ **ಸಂಗೀತ ಕಲಾನಿಧಿ,** ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ಹಾಗೂ ಪದ್ಮಭೂಷಣ ಪ್ರಶಸ್ತಿ.

ತೊಂಬತ್ತೇಳು ವರ್ಷಗಳ ಕಾಲ ತುಂಬು ಜೀವನವನ್ನು ನಡೆಸಿ 1961 ಮೇ 17ರಂದು ದೈವಾಧೀನರಾದರು.

## ಬಿಡಾರಂ ಕೃಷ್ಣಪ್ಪ

(ಕ್ರಿ. ಶ. 1866 - 1931)



ಶ್ರದ್ಧೆಯಿದ್ದಲ್ಲಿ ಸಿದ್ಧಿ ಎಂಬುದನ್ನು ತಮ್ಮ ಜೀವನದ ಮೂಲಕ ತೋರಿಸಿದವರು ಕೃಷ್ಣಪ್ಪನವರು. ಇಂದಿಗೂ ಪ್ರಖ್ಯಾತವಾಗಿರುವ ಮೈಸೂರಿನ ಸುಪ್ರಸಿದ್ಧ ಶ್ರೀ ಪ್ರಸನ್ನ ಸೀತಾರಾಮ ಮಂದಿರವನ್ನು ನಿರ್ಮಿಸಿ ಸಂಗೀತ ಕಾರ್ಯಕ್ರಮಗಳು ಸಮ್ಮೇಳನಗಳು ನಡೆಯಲು ಅನುವು ಮಾಡಿಕೊಟ್ಟರು.

ಕೃಷ್ಣಪ್ಪನವರ ಜನನ 1866ನೇ ಸೆಪ್ಟೆಂಬರ್ ತಿಂಗಳಲ್ಲಿ. ತಂದೆ ವಿಶ್ವನಾಥಯ್ಯ. ತಾಯಿ ಸರಸ್ವತಿಬಾಯಿ. ಕೊಂಕಣ ದೇಶಸ್ಥ ಬ್ರಾಹ್ಮಣರು. ಉಡುಪಿಯ ನಂದಳಿಕೆ ಗ್ರಾಮವೇ ಇವರ ಸ್ಥಳ. ತಂದೆ ಧರ್ಮಸ್ಥಳ ದಶಾವತಾರ ನಾಟಕ ಮಂಡಳಿಯ ನಟರು. ನಾಟಕ ಮಂಡಳಿಯು ಪ್ರದರ್ಶನವನ್ನು ಕೊಡಲು ಮೈಸೂರಿಗೆ ಬಂದಾಗ, ವಿಶ್ವನಾಥಯ್ಯ ಮೈಸೂರಿನಲ್ಲಿ ನೆಲಸಿ ಬಿಡಾರದವರೆನಿಸಿಕೊಂಡರು. ಇವರಿಗೆ ವಯಸ್ಸಾಗಲು ಹಿರಿಯಮಗ ದೇವರನಾಮಗಳನ್ನು ಹಾಡಿ ಬಂದ ಸಂಭಾವನೆಯಲ್ಲಿ ಸಂಸಾರ ನಡೆಸುತ್ತಿದ್ದರು. ಒಮ್ಮೆ ಆಂಜನೇಯಸ್ವಾಮಿ ದೇವಸ್ಥಾನದ ಬಳಿ ಕೃಷ್ಣಪ್ಪನವರು ಹಾಡುತ್ತಿದ್ದರು. ಡಾಕ್ಟರ್ ನಂಜುಂಡಯ್ಯನವರು ಇವರ ಹಾಡಿಕೆಗೆ ಮೆಚ್ಚಿ ಒಂದು ರೂಪಾಯಿ ಕೊಟ್ಟರು. ಇದೇ ಪ್ರತಿನಿತ್ಯದ ರೂಢಿಯಾಯಿತು. ಸಾಹುಕಾರ್ ತಿಮ್ಮಯ್ಯನವರ ಸಹಕಾರದಿಂದ ಕರೂರು ರಾಮಸ್ವಾಮಿಯವರಲ್ಲಿ ಸಂಗೀತ ಪಾಠ ಪ್ರಾರಂಭವಾಯಿತು. ನಾಟಕ ಮಂಡಳಿಯ ನಟರಾದರು. ನಾಟಕ ಮಂಡಳಿಯ ಗಿರಿಭಟ್ಟರ ತಮ್ಮಯ್ಯನವರಲ್ಲಿ ಸಂಗೀತ ಶಿಕ್ಷಣವು ಮುಂದುವರಿಯಿತು. ನಂತರ ಕರಿಗಿರಿರಾಯರಲ್ಲೂ, ವೀಣೆ ಶೇಷಣ್ಣನವರಲ್ಲೂ ಅಭ್ಯಾಸ ಮಾಡಿದರು. ಮಹಾರಾಜರ ಕೃಪೆಗೆ ಪಾತ್ರರಾದರು. ನಟರಾಗಿಯೂ, ಗಾಯಕರಾಗಿಯೂ ಮಹಾರಾಜರಿಂದ ಮನ್ನಣೆ ದೊರೆಯಿತು.

ದಕ್ಷಿಣ ಭಾರತಾದ್ಯಂತ ಸಂಚರಿಸಿ ಸಂಗೀತ ಕಾರ್ಯಕ್ರಮವನ್ನು ನೀಡಿದರು. ಪಂಡಾರು ಸನ್ನಿಧಿಯಲ್ಲಿ ಗಾಯಕ ಶಿಖಾಮಣಿ, ಮೈಸೂರು ಆಸ್ಥಾನದಿಂದ ಗಾನವಿಶಾರದ ಬಿರುದುಗಳು ಬಂದವು. ಸಂಗೀತಸಾಧನೆ, ಶಿಷ್ಯರಿಗೆ ವಿದ್ಯಾದಾನ, ಸಂಗೀತ ಕಛೇರಿಗಳು ಅವಿರತವಾಗಿ ನಡೆದವು. ಮುನಿಸಿಪಲ್ ಕೌನ್ಸಿಲ್ ಸದಸ್ಯರಾಗಿಯೂ ನಾಟಕ ಮಂಡಳಿಯ ನಿರ್ದೇಶಕರಾಗಿಯೂ ಕಾರ್ಯ ನಿರ್ವಹಿಸಿದರು. ತಾವು ಸಂಪಾದಿಸಿದ ಎರಡೆಕರೆ ಜಮೀನು ಮತ್ತು ಮನೆಯನ್ನು

ಮಾರಿ ರಾಮಮಂದಿರವನ್ನು ಕಟ್ಟಿದರು. ಮದ್ರಾಸು, ಬೊಂಬಾಯಿ, ತಿರುಚಿ, ಕರ್ನಾಟಕದ ಮೂಲೆಮೂಲೆಯಲ್ಲೂ ಹಾಡಿ ಬಂದ ಹಣವನ್ನೆಲ್ಲಾ ಮಂದಿರದ ನಿರ್ಮಾಣಕ್ಕೆ ವಿನಿಯೋಗಿಸಿದರು.

ಆಂಜನೇಯನ ಪರಮಭಕ್ತರಾದ ಕೃಷ್ಣಪ್ಪನವರಿಗೆ ಕೋಡೆ ತಿರುನಾರಾಯಣ ಅಯ್ಯಂಗಾರರಿಂದ ತಾರಕಮಂತ್ರ ಉಪದೇಶ. ತಮ್ಮ ಕಂಚಿನ ಕಂಠವನ್ನು ದಿನಕ್ಕೆ ಎಂಟು ಗಂಟೆಗಳ ಸಂಗೀತ ಸಾಧನೆ ಮಾಡಿ ಕಾಪಾಡಿಕೊಂಡರು. ಇವರದು ತ್ರಿಸ್ಥಾಯಿಗಳಲ್ಲೂ ಸುಲಭವಾಗಿ ಸಂಚರಿಸುವ ಸಾವಿರಾರು ಶ್ರೋತೃಗಳಿಗೆ ಸ್ಪಷ್ಟವಾಗಿ ಕೇಳುವ ಮಧುರವಾದ ಶಾರೀರ, ಸ್ಪಷ್ಟವಾದ ಉಚ್ಚಾರಣೆ. ಪಲ್ಲವಿಯಲ್ಲಿ ಹೆಚ್ಚಿನ ಪಾಂಡಿತ್ಯವಿದ್ದರೂ ಸರಳವಾದ ಪಲ್ಲವಿಗಳನ್ನೇ ಹಾಡುತ್ತಿದ್ದರು. ಪಿಟೀಲಿನಲ್ಲಿ ಪರಿಶ್ರಮವಿತ್ತು. ಹಲವಾರು ವರ್ಣ, ಕೃತಿಗಳನ್ನು ರಚಿಸಿದ್ದಾರೆ. ಧರ್ಮವತಿ ರಾಗದ ಅಂಬ ಬ್ರೋವವೇ ಬಹಳ ಪ್ರಸಿದ್ಧಿಯಾಗಿದೆ. ಅರವತ್ತೈದು ವರ್ಷಗಳ ತುಂಬು ಜೀವನವನ್ನು ನಡೆಸಿ 29-7-1931ರಂದು ಶ್ರೀರಾಮನ ಪಾದಾರವಿಂದವನ್ನು ಸೇರಿದರು.

## ಶ್ರೀಪಾದರಾಜರು

(ಕ್ರಿ.ಶ. 1406 - 1504)



ಸಂಸ್ಕೃತವು ಪ್ರಾಧಾನ್ಯವಾಗಿದ್ದ ಕಾಲದಲ್ಲಿ ಕನ್ನಡ ದೇವರನಾಮಗಳನ್ನು ರಂಗ ವಿಠಲ ಎಂಬ ಅಂಕಿತದೊಡನೆ ರಚಿಸಿ ಹಾಡಲು ಪ್ರೋತ್ಸಾಹಿಸಿದಂಥಾ ಮಹಾಮಹಿಮರು ಶ್ರೀಪಾದರಾಜರು. ತಂದೆ ಶೇಷಗಿರಿ ಆಚಾರ್ಯ, ತಾಯಿ ಗಿರಿಯಮ್ಮ. ಚೆನ್ನಪಟ್ಟಣದ ಅಬ್ಬೂರಿನಲ್ಲಿ ವಾಸ. ಪೂರ್ವಾಶ್ರಮದ ಹೆಸರು ಲಕ್ಷ್ಮೀನಾರಾಯಣ. ಸ್ವರ್ಣವರ್ಣ ತೀರ್ಥರ ಅನುಗ್ರಹದಿಂದ ಉಪನಯನವಾಗಿ ಸಕಲ ಶಾಸ್ತ್ರ ಪಾರಂಗತರಾದರು. ಸ್ವರ್ಣವರ್ಣ ತೀರ್ಥರು ಅಂತ್ಯಕಾಲದಲ್ಲಿ ಶ್ರೀರಂಗದಲ್ಲಿದ್ದ ಕಾರಣ ಲಕ್ಷ್ಮೀನಾರಾಯಣನೂ ಅವರೊಡನೆ ಅಲ್ಲಿ ನೆಲಸಿದ. ತಮಿಳಿನಲ್ಲಿ ಪ್ರಬಂಧಗಳನ್ನು ಕೇಳಿ ತಾನೂ ಏಕೆ ಕನ್ನಡ ಭಾಷೆಯಲ್ಲಿ ಧರ್ಮಗ್ರಂಥಸಾರವನ್ನು ಹೇಳಬಾರದು ಎಂದೆನಿಸಿ, ಕನ್ನಡ ಭಾಷೆಯಲ್ಲಿ ರಚಿಸಲು ಪ್ರಾರಂಭಿಸಿದರು. ಅವುಗಳನ್ನು ಹಾಡಲು ಭಾಗವತ ತಂಡವನ್ನೇ ಕಟ್ಟಿದರು. ರಘುನಾಥ ತೀರ್ಥರೆಂಬ ಯತಿವರ್ಯರೊಡನೆ ಕಾಶೀಯಾತ್ರೆಯನ್ನು ಕೈಗೊಂಡು ಅವರಿಂದ ಶ್ರೀಪಾದರಾಜರೆನಿಸಿದರು. ಉತ್ತರ ಭಾರತದ ಯಾತ್ರೆಯನ್ನು ಮುಗಿಸಿ ಮುಳಬಾಗಿಲಿಗೆ ಬಂದು ಮಠವನ್ನು ಸ್ಥಾಪಿಸಿದರು. ಭಕ್ತರು ಗಂಗೆಯಲ್ಲಿ ಸ್ನಾನ ಮಾಡಬೇಕೆಂದು ಆಶಿಸಿದಾಗ ನರಸಿಂಹ ತೀರ್ಥದಲ್ಲಿ ಗಂಗೋದ್ಭವವಾಗುವಂತೆ ಮಾಡಿ ಭಕ್ತರ ಇಷ್ಟಾರ್ಥವನ್ನು ಈಡೇರಿಸಿದರು.

ಇಂದಿಗೂ ಅವರ ಬೃಂದಾವನವನ್ನು ನರಸಿಂಹ ತೀರ್ಥದ ಬಳಿ ಕಾಣಬಹುದು. ಪವಾಡಪುರುಷರಿವರು. ಅವರ ಯಾತ್ರೆಯ ಸಂದರ್ಭದಲ್ಲಿ ಅನೇಕ ಕಡೆ ಅತಿಮಾನುಷ ಕಾರ್ಯಗಳನ್ನು ಮಾಡಿರುವ ನಿದರ್ಶನಗಳಿವೆ.

ಶ್ರೀಪಾದರಾಜರು ಹಲವಾರು ಸಂಸ್ಕೃತ ಗ್ರಂಥಗಳನ್ನೂ ರಚಿಸಿದ್ದಾರೆ. ಅದರಲ್ಲಿ ವಾಗ್ವಜ್ರವೆಂಬ ಗ್ರಂಥ ಉಲ್ಲೇಖಾರ್ಹ. ಇವರು ಕನ್ನಡ ದೇವರನಾಮಗಳ ಮೂಲಕ ಕರ್ನಾಟಕ ಸಂಗೀತಕ್ಕೆ, ಕನ್ನಡ ವಾಙ್ಮಯಕ್ಕೆ ಸಲ್ಲಿಸಿರುವ ಸೇವೆ ಅಪಾರ. ಪೂಜಾಕಾಲದಲ್ಲಿ ಅವರು ರಚಿಸಿದ ಭ್ರಮರಗೀತಾ, ವೇಣುಗೀತಾ, ಗೋಪಿಗೀತೆಗಳನ್ನು ಭಾಗವತರಿಂದ ಹಾಡಿಸಲಾಗುತ್ತಿತ್ತು. ಒಮ್ಮೊಮ್ಮೆ ಅವರೇ ಮಂಗಳಾರತಿಯ ಸಮಯದಲ್ಲಿ ಭಾಗವತ ಸೇವೆಗೆ ನಿಂತಾಗ, ಭಕ್ತರೆಲ್ಲ ನರ್ತನ ಮಾಡುತ್ತಿದ್ದರು. ಹೊಸ ಹೊಸ ದೇವರನಾಮಗಳು ಆ ವೇಳೆಯಲ್ಲಿ ಮೂಡುತ್ತಿದ್ದವು. ಇವರೇ ದಾಸಸಾಹಿತ್ಯದ ಪ್ರವರ್ತಕರೆಂದು ಹೇಳಿದರೂ ತಪ್ಪಾಗಲಾರದು.

ತಾವು ಕನ್ನಡದಲ್ಲಿ ಹಾಡುಗಳನ್ನು ರಚಿಸಿದ್ದಲ್ಲದೇ ಇತರರನ್ನೂ ರಚನೆಗೆ ಪ್ರಚೋದಿಸಿದರು. ಭಾಗವತ ದಶಮಸ್ಕಂದವನ್ನು ಹಾಡುಗಳ ರೂಪದಲ್ಲಿ ರಚಿಸಿದರು. ಕ್ರಿ. ಶ. 1504 ರವರೆಗೆ ಧರ್ಮಪೀಠದಲ್ಲಿದ್ದು ಜೇಷ್ಠಶುದ್ಧ ಚತುರ್ದಶಿಯಂದು ಬೃಂದಾವನಸ್ಥರಾದರು.

ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ

ನಮಃ ಪುರಂದರಾರ್ಯಾಯ ವಿಜಯರಾಜಾಯತೇ ನಮಃ

## ನಿಜಗುಣ ಶಿವಯೋಗಿಗಳು



ಕನ್ನಡನಾಡಿನ ವೈರಾಗ್ಯನಿಧಿ ನಿಜಗುಣ ಶಿವಯೋಗಿಗಳು. ವೇದ, ಉಪನಿಷತ್ತು, ಸ್ಮೃತಿ, ಪುರಾಣ, ಆಗಮ, ಭಗವದ್ಗೀತೆ ಇವುಗಳನ್ನು ಆಳವಾಗಿ ಅಭ್ಯಾಸಮಾಡಿ, ಕನ್ನಡ ಜನತೆಗೆ ಕನ್ನಡ ಭಾಷೆಯ ಮೂಲಕ ಬೋಧಿಸಿ, ಕನ್ನಡ ಜನತೆಯನ್ನು ಉದ್ಧರಿಸಿದ ಮಹಾನುಭಾವರು.

ಇವರ ಕಾಲ ಮತ್ತು ಜೀವನದ ಬಗ್ಗೆ ಹೆಚ್ಚೇನೂ ತಿಳಿದುಬಂದಿಲ್ಲ. ಇವರು 15ನೆಯ ಶತಮಾನದಲ್ಲಿದ್ದವರು. ಕೊಳ್ಳೇಗಾಲದ ಶಂಭುಲಿಂಗ ಬೆಟ್ಟದಲ್ಲಿ ವಾಸಿಸುತ್ತಿದ್ದರೆಂದು ತಿಳಿದು ಬರುತ್ತದೆ. ಕೆಲವು ಕಾಲ ನಿಜಗುಣ ಶಿವಯೋಗಿಗಳು ಅರಸರಾಗಿದ್ದರೆಂದೂ, ವೈರಾಗ್ಯ ಮೂಡಿ ಸಂಸಾರವನ್ನು ತ್ಯಜಿಸಿ ಸಂನ್ಯಾಸಿಯಾದರೆಂದೂ ಹೇಳಲಾಗಿದೆ.

ಶಂಭುಲಿಂಗವೆಂಬ ಅಂಕಿತವು ಇವರ ರಚನೆಗಳಲ್ಲಿದೆ. ಸಂಸ್ಕೃತ ಮತ್ತು ಕನ್ನಡ ಭಾಷೆಗಳೆರಡರಲ್ಲೂ ಇವರ ಗ್ರಂಥಗಳಿವೆ. ಇವರ ಗ್ರಂಥಗಳು:

1. ಕೈವಲ್ಯ ಪದ್ಧತಿ : ಸಂಗೀತದ ಬಗ್ಗೆ ಇರುವ ಈ ಗ್ರಂಥವು ಬಹಳ ಜನಪ್ರಿಯವಾಗಿದೆ.
2. ವಿವೇಕ ಚಿಂತಾಮಣಿ : ಕನ್ನಡದ ಮೊದಲ ವಿಶ್ವಕೋಶ.
3. ಪರಮಾರ್ಥ ಪ್ರಕಾಶಿಕೆ : ಕನ್ನಡದಲ್ಲಿ ಮೊದಲ ಯೋಗಗ್ರಂಥ.
4. ಅನುಭವ ಸಾರವು : ದಶೋಪನಿಷತ್ತುಗಳ ಸಂಗ್ರಹ.
5. ಪರಮಾನುಭವ ಭೋದೆ : ವೇದಾಂತದ ಸಾರ ಸಂಗ್ರಹ.
6. ಪರಮಾರ್ಥ ಗೀತೆ : ಭಾರತೀಯ ಸೃಷ್ಟಿ ಶಾಸ್ತ್ರ.
7. ಅರವತ್ತುಮೂರರ ತ್ರಿಪದಿ : ಭಕ್ತಿ ಗೀತೆಗಳು

ಮಾನವನನ್ನು ಮಹಾದೇವನನ್ನಾಗಿ ಪರಿವರ್ತಿಸುವ ಸಂದೇಶ ಇವರ ಕೃತಿಗಳಲ್ಲಡಗಿದೆ. ಮಾನವ ಕೋಟಿಯ ಉದ್ಧಾರಕ್ಕಾಗಿ ಇವರು ಬಾಳಿದರು. ದುಃಖ ಮತ್ತು ಅಶಾಂತಿಯಲ್ಲಿ ತೊಳಲುತ್ತಿದ್ದವರಿಗೆ ಇವರ ನುಡಿಯು ಶಾಂತಿಯನ್ನು ನೀಡುತ್ತದೆ. ಪಂಡಿತರಿಗೆ ಮಾತ್ರ ಮೀಸಲಾಗಿದ್ದ ತತ್ವಜ್ಞಾನವನ್ನು, ಶಿವಯೋಗ ರಹಸ್ಯವನ್ನು ಮೇಲುಕೀಳೆನ್ನದೆ, ಜಾತಿಮತ ಭೇದವಿಲ್ಲದೆ, ಸ್ತ್ರೀ ಪುರುಷರೆಂಬ ವ್ಯತ್ಯಾಸವಿಲ್ಲದೇ ಎಲ್ಲರ ಆಸ್ತಿಯಾಗುವಂತೆ ಮಾಡಿದ ನಿಜಗುಣ ಶಿವಯೋಗಿಗಳು ಸದಾವಂದ್ಯರು.

ಕನ್ನಡ ಸಾಹಿತ್ಯದಲ್ಲಿ ನಿಜಗುಣರ ಕೃತಿಗಳಿಗೆ ಉನ್ನತ ಸ್ಥಾನವಿದೆ. ಕೈವಲ್ಯಪದ್ಧತಿಯ ಪ್ರತಿಯೊಂದು ರಚನೆಯೂ ಸಂಗೀತ ಪ್ರಪಂಚದ ಆಸ್ತಿ. ಇವುಗಳನ್ನು ನಿರಕ್ಷರ ಕುಕ್ಷಿಗಳೂ ಸುಲಭವಾಗಿ ಕಂಠಪಾಠ ಮಾಡಿಕೊಂಡು ಹಾಡಬಹುದು.

ನಿಜಗುಣರು ಸಂಗೀತವೇತ್ತರಾದ್ದರಿಂದ ಅವರ ರಚನೆಗಳಿಗೆ ರಾಗ ಮತ್ತು ತಾಳವನ್ನು ಅಳವಡಿಸಿ ಹಾಡಬಹುದು. ರಚನೆಗಳ ಮೂಲಕ ಜನರ ನೈತಿಕ ಉನ್ನತಿಯನ್ನು ಸಾಧಿಸುವ, ನಿಜಗುಣರ ಲೋಕ ತಿದ್ದುವ ರೀತಿಯು ಶ್ಲಾಘ್ಯವಾಗಿದೆ.

## ವಿಜಯದಾಸರು

(ಕ್ರಿ. ಶ. 1682-1755)



ಹರಿದಾಸರಲ್ಲಿ ದಾಸಕೂಟ ಸೇರಿರುವವರು ವಿಜಯದಾಸರು. ಪುರಂದರದಾಸರಿಂದ ಅನುಗ್ರಹೀತರಾಗಿ ಅವರ ಹಾದಿಯಲ್ಲೇ ಉಗಾಭೋಗ, ಸುಳಾದಿ ದೇವರನಾಮಗಳನ್ನು ರಚಿಸಿದರು. ರಾಯಚೂರು ಜಿಲ್ಲೆಯ ಮಾನವೀ ತಾಲ್ಲೂಕಿಗೆ ಸೇರಿದ ಚೀಕಲಪರಿ ಗ್ರಾಮದಲ್ಲಿ ವಿಜಯದಾಸರ ಜನನ. ಈ ಗ್ರಾಮವು ತುಂಗಾ ತೀರದಲ್ಲಿದ್ದು ಶ್ರೀಪಾದರಾಜರಿಂದ ಸ್ಥಾಪಿತವಾದ ಅಶ್ವಥ ನರಸಿಂಹ ಕ್ಷೇತ್ರದಿಂದ ಕಂಗೊಳಿಸುತ್ತಿದೆ. ತಂದೆ ಶ್ರೀನಿವಾಸಪ್ಪ, ತಾಯಿ ಕೂಸಮ್ಮ. ಇವರ ಹಿರಿಯ ಮಗನೇ ದಾಸಪ್ಪ. ಬಡತನದ ಬೇಗೆಯಲ್ಲಿ ಬೆಂದು, ಹಿರಿಯರಿಗೂ ತಿಳಿಸದೆ ಮನೆಯನ್ನು ತ್ಯಜಿಸಿ ದೇಶಾಂತರ ಹೊರಟರು ದಾಸಪ್ಪ.

ಕಾಶಿಯನ್ನು ಸೇರಿ ಗಂಗಾಸ್ನಾನ ಮಾಡಿಕೊಂಡು ವಿರಾಗಿಯಾಗಿ ಹಲವಾರು ಕ್ಷೇತ್ರದರ್ಶನ ಮಾಡಿಕೊಂಡು ಚೀಕಲಪರಿಗೆ ಹಿಂದಿರುಗಿದರು. ಹೋದ ಮಗ ಹಿಂದಿರುಗಿ ಬಂದನಲ್ಲ ಎಂದು ಸಂತೋಷಪಟ್ಟು ತಂದೆತಾಯಿಗಳು ಅರಳಮ್ಮ ಎಂಬ ಕನ್ಯೆಯೊಡನೆ ವಿವಾಹ ಮಾಡಿದರು. ತಂದೆ ತಾಯಿ ಮೃತರಾದೊಡನೆ ಮತ್ತೆ ಕಾಶೀಯಾತ್ರೆ ಮಾಡಲು ಹೊರಟರು. ಅಲ್ಲಿರುವಾಗ ಒಂದು ದಿವಸ ಸ್ವಪ್ನದಲ್ಲಿ ಪುರಂದರದಾಸರ ದರ್ಶನವಾಯಿತು. ಅವರು ದಾಸಪ್ಪನ ನಾಲಿಗೆಯ ಮೇಲೆ **ವಿಜಯ** ಎಂಬ ಬೀಜಾಕ್ಷರಗಳನ್ನು ಬರೆದು ಇಂದಿನಿಂದ ನೀನು ಹರಿದಾಸನಾದೆ ಎಂದು ಅಪ್ಪಣೆ ಕೊಡಿಸಿದರು. ಅಂದಿನಿಂದ ದಾಸಪ್ಪನು ವಿಜಯವಿಠಲನಾದನು. ಅನೇಕರು ಅವರ ಶಿಷ್ಯರಾದರು. ಅಷ್ಟೈಶ್ವರ್ಯ ಪ್ರಾಪ್ತಿಯಾಯಿತು. ಹಲವಾರು ವರ್ಷಗಳ ನಂತರ ಪರಿವಾರ ಸಮೇತರಾಗಿ ಚೀಕಲಪರಿಗೆ ಮರಳಿ ಗೃಹಸ್ಥ ಜೀವನವನ್ನು ನಡೆಸಿದರು. ಸುಳಾದಿಗಳನೇಕವನ್ನು ವಿಜಯ ವಿಠಲ ಎಂಬ ಅಂಕಿತದೊಡನೆ ರಚಿಸಿದರು. ಸುಳಾದಿ ವಿಜಯದಾಸರೆನಿಸಿದರು. ಕಂಕಣಾಕಾರ ಸುಳಾದಿ, ಹಬ್ಬದ ಸುಳಾದಿ, ಹರಿದಾಸ ಲಕ್ಷಣ ಸುಳಾದಿ, ಶ್ರೀ ಕೃಷ್ಣಮಹಿಮೆಗಳನ್ನು ತಿಳಿಸುವ ಸುಳಾದಿ ಎಂಬುದಾಗಿ ವಿಷಯಾಧಾರಿತ ಸುಳಾದಿಗಳನ್ನು ಹಾಡಿದ್ದಾರೆ. ಭಾಗವತ ಧರ್ಮಪ್ರಚಾರವನ್ನು ಕೈಕೊಂಡು ಪರಿವಾರ ಸಮೇತಹಲವಾರು ಕ್ಷೇತ್ರಗಳನ್ನು ಸಂದರ್ಶಿಸಿ ಆದವಾನಿ ಸಮೀಪದಲ್ಲಿರುವ ಛಾಗಿಗೆ ಬಂದು ನೆಲೆಸಿದರು. ಅಲ್ಲಿಂದ ಚೀಕಲಪರಿಗೆ ಹಿಂದಿರುಗಿ, ನಂತರ ಬಳ್ಳಾರಿಯಲ್ಲಿ ಭಾಸ್ಕರ ಕ್ಷೇತ್ರವೆನಿಸಿದ ಚಿಪ್ಪಗಿರಿಗೆ ಬಂದು ನೆಲೆಸಿ ಗೋಪಾಲಕೃಷ್ಣ ಸನ್ನಿಧಿಯಲ್ಲಿ ವಾಸವಾಗಿದ್ದರು. ತಮ್ಮ ಎಪ್ಪತ್ತಮೂರನೇ ವಯಸ್ಸಿನಲ್ಲಿ ಕಾರ್ತಿಕ ಶುದ್ಧ ದಶಮಿ ಗುರುವಾರದಂದು ವೈಕುಂಠವಾಸಿಗಳಾದರು. ಸಹಸ್ರಾರು ಸಂಖ್ಯೆಯಲ್ಲಿ ಉಗಾಭೋಗ, ಸುಳಾದಿ, ದೇವರನಾಮಗಳನ್ನು ಅವರು ರಚಿಸಿದ್ದರೂ ನಮಗೆ ದೊರೆತಿರುವುದು ಬಹಳ ಕಡಿಮೆ.

## ಸರ್ಪಭೂಷಣ ಶಿವಯೋಗಿ

(ಕ್ರಿ. ಶ.1795 - 1839)



ನಿಜಗುಣ ಶಿವಯೋಗಿಗಳನ್ನು ಬಿಟ್ಟರೆ, ವೀರಶೈವ ಕೃತಿ ಕರ್ತೃಗಳಲ್ಲಿ ಪ್ರಸಿದ್ಧರೆಂದರೆ ಸರ್ಪಭೂಷಣ ಶಿವಯೋಗಿಗಳು. 1795ರಲ್ಲಿ ಜನ್ಮತಾಳಿದ ಇವರಿಗೆ ತಂದೆ ತಾಯಿಗಳು ಇಟ್ಟ ಹೆಸರು ಸಪ್ಪಣ್ಣನೆಂದು. ಮೇಧಾವಿಯೂ ಮತ್ತು ತೇಜಸ್ವಿಯೂ ಆದ ಸಪ್ಪಣ್ಣನಿಗೆ ಚರಮೂರ್ತಿ ಗುರುಸಿದ್ಧಸ್ವಾಮಿಗಳೆಂಬ ತಪಸ್ವಿಗಳ ಅನುಗ್ರಹವಾಗಿ ಅವರ ಹತ್ತಿರ ಶಿಷ್ಯ ವೃತ್ತಿಯನ್ನು ಪಡೆಯುವ ಭಾಗ್ಯ ದೊರೆಯಿತು. ಸದ್ಗುರುಗಳ ಪ್ರಭಾವದಿಂದ ಸಪ್ಪಣ್ಣನು ಸಂಗೀತ ಸಾಹಿತ್ಯ ವಿದ್ಯಾ ಪ್ರೌಢಿಮೆಯನ್ನು ಗಳಿಸಿ, ನಂತರ ಕರಿಬಸಪ್ಪಸ್ವಾಮಿಗಳಿಂದ ಶಿವಯೋಗಾನುಷ್ಠಾನ ಉಪದೇಶವನ್ನು ಹೊಂದಿ, ವೈರಾಗ್ಯಮೂರ್ತಿಗಳಾಗಿ ಸರ್ಪಭೂಷಣ ಶಿವಯೋಗಿಗಳೆಂದು ಹೆಸರುವಾಸಿಯಾದರು. ಮತ್ತು ತಮ್ಮದೇ ಆದ ಸರ್ಪಭೂಷಣ ಮಠವನ್ನು ಸ್ಥಾಪಿಸಿದರು. ಆಮೇಲೆ ಅನೇಕ ಶಿವಕ್ಷೇತ್ರಗಳ ತೀರ್ಥಯಾತ್ರೆಯನ್ನು ಕೈಗೊಂಡು 1828ರಲ್ಲಿ ಬೆಂಗಳೂರಿಗೆ ಮರಳಿ ಬಂದರು. ನಂತರ ಸಂಪೂರ್ಣವಾಗಿ ಆಧ್ಯಾತ್ಮ ಕಾರ್ಯಗಳಲ್ಲಿ ನಿರತರಾಗಿ ಗ್ರಂಥಗಳ ವ್ಯಾಸಂಗ, ಪ್ರವಚನ ಮತ್ತು ಶಿವತತ್ವಗಳನ್ನೊಳಗೊಂಡ ಅನೇಕ ರಚನೆಗಳನ್ನು ಮಾಡುವುದರಲ್ಲಿ ಆಸಕ್ತರಾದರು. ರಾಗ, ತಾಳ ಬದ್ಧವಾದ, ಗಾನಯೋಗ್ಯವಾದ ತಾತ್ವಿಕ ಹಾಡುಗಬ್ಬಗಳ ಗುಚ್ಛವನ್ನೊಳಗೊಂಡ **ಕೈವಲ್ಯ ಕಲ್ಪವಲ್ಲರಿ** ಎಂಬ ದಿವ್ಯ ಗ್ರಂಥವನ್ನು ಕನ್ನಡದಲ್ಲಿ ಬರೆದರು. ಇದಲ್ಲದೆ ಜ್ಞಾನಶತಕವೆಂಬ ಸಂಸ್ಕೃತ ಗ್ರಂಥವನ್ನೂ ರಚಿಸಿದರು. ಇವರ ಕೃತಿಮುದ್ರೆ **ಗುರುಸಿದ್ಧ.**

ಇಂಥ ಮಹಾಮಹಿಮರಾದ, ವಿದ್ಯಾಸಂಪನ್ನರಾದ ಮತ್ತು ಸಂಗೀತ ಸಾಹಿತ್ಯ ನಿಪುಣರಾದ ಸರ್ಪಭೂಷಣರು ಬೆಂಗಳೂರಿನಲ್ಲೇ ಲಿಂಗೈಕ್ಯರಾದರು.

# ಪ್ರಯೋಗ ವಿಭಾಗ

## ಪತ್ರಿಕೆ - 1

### 12. ಸೂಳಾದಿ ಸಪ್ತತಾಳಗಳ ಅಲಂಕಾರಗಳು

**ರಾಗ - ಮಾಯಾಮಾಳವಗೌಳ**

**ತಿಶ್ರಜಾತಿ ಧ್ರುವತಾಳ**

ಅಂಗ : 1 ಲಘು, 1 ದ್ರುತ, 2ಲಘು
3 + 2 + 3 + 3 = 11 ಅಕ್ಷರಗಳು.

1. ॥ ಸ ರಿ ಗ । ರಿ ಸ । ಸ ರಿ ಗ । ರಿ ಗ ಮ ॥
॥ ರಿ ಗ ಮ । ಗ ರಿ । ರಿ ಗ ಮ । ಗ ಮ ಪ ॥
॥ ಗ ಮ ಪ । ಮ ಗ । ಗ ಮ ಪ । ಮ ಪ ದ ॥
॥ ಮ ಪ ದ । ಪ ಮ । ಮ ಪ ದ । ಪ ದ ನಿ ॥
॥ ಪ ದ ನಿ । ದ ಪ । ಪ ದ ನಿ । ದ ನಿ ಸ ॥
॥ ಸ ನಿ ದ । ನಿ ಸ । ಸ ನಿ ದ । ನಿ ದ ಪ ॥
॥ ನಿ ದ ಪ । ದ ನಿ । ನಿ ದ ಪ । ದ ಪ ಮ ॥
॥ ದ ಪ ಮ । ಪ ದ । ದ ಪ ಮ । ಪ ಮ ಗ ॥
॥ ಪ ಮ ಗ । ಮ ಪ । ಪ ಮ ಗ । ಮ ಗ ರಿ ॥
॥ ಮ ಗ ರಿ । ಗ ಮ । ಮ ಗ ರಿ । ಗ ರಿ ಸ ॥

**ಚತುರಶ್ರಜಾತಿ ಧ್ರುವತಾಳ**

**ಅಂಗ : 1 ಲಘು, 1 ದ್ರುತ, 2ಲಘು**
**4 + 2 + 4 + 4 = 14 ಅಕ್ಷರಗಳು.**

1. ॥ ಸ ರಿ ಗ ಮ । ಗ ರಿ । ಸ ರಿ ಗ ರಿ । ಸ ರಿ ಗ ಮ ॥
॥ ರಿ ಗ ಮ ಪ । ಮ ಗ । ರಿ ಗ ಮ ಗ । ರಿ ಗ ಮ ಪ ॥
॥ ಗ ಮ ಪ ದ । ಪ ಮ । ಗ ಮ ಪ ಮ । ಗ ಮ ಪ ದ ॥
॥ ಮ ಪ ದ ನಿ । ದ ಪ । ಮ ಪ ದ ಪ । ಮ ಪ ದ ನಿ ॥

|| ಪ ದ ನಿ ಸ | ನಿ ದ | ಪ ದ ನಿ ದ | ಪ ದ ನಿ ಸ ||

|| ಸ ನಿ ದ ಪ | ದ ನಿ | ಸ ನಿ ದ ನಿ | ಸ ನಿ ದ ಪ ||

|| ನಿ ದ ಪ ಮ | ಪ ದ | ನಿ ದ ಪ ದ | ನಿ ದ ಪ ಮ ||

|| ದ ಪ ಮ ಗ | ಮ ಪ | ದ ಪ ಮ ಪ | ದ ಪ ಮ ಗ ||

|| ಪ ಮ ಗ ರಿ | ಗ ಮ | ಪ ಮ ಗ ಮ | ಪ ಮ ಗ ರಿ ||

|| ಮ ಗ ರಿ ಸ | ರಿ ಗ | ಮ ಗ ರಿ ಗ | ಮ ಗ ರಿ ಸ ||

## ಖಂಡಜಾತಿ ಧ್ರುವತಾಳ

**5 + 2 + 5 + 5 = 17 ಅಕ್ಷರಗಳು.**

1. || ಸ ರಿ ಗ ಮ ಪ | ಮ ಗ | ಸ ರಿ ಗ ಮ ಗ | ಸ ರಿ ಗ ಮ ಪ ||

|| ರಿ ಗ ಮ ಪ ದ | ಪ ಮ | ರಿ ಗ ಮ ಪ ಮ | ರಿ ಗ ಮ ಪ ದ ||

|| ಗ ಮ ಪ ದ ನಿ | ದ ಪ | ಗ ಮ ಪ ದ ಪ | ಗ ಮ ಪ ದ ನಿ ||

|| ಮ ಪ ದ ನಿ ಸ | ನಿ ದ | ಮ ಪ ದ ನಿ ದ | ಮ ಪ ದ ನಿ ಸ ||

|| ಸ ನಿ ದ ಪ ಮ | ಪ ದ | ಸ ನಿ ದ ಪ ದ | ಸ ನಿ ದ ಪ ಮ ||

|| ನಿ ದ ಪ ಮ ಗ | ಮ ಪ | ನಿ ದ ಪ ಮ ಪ | ನಿ ದ ಪ ಮ ಗ ||

|| ದ ಪ ಮ ಗ ರಿ | ಗ ಮ | ದ ಪ ಮ ಗ ಮ | ದ ಪ ಮ ಗ ರಿ ||

|| ಪ ಮ ಗ ರಿ ಸ | ರಿ ಗ | ಪ ಮ ಗ ರಿ ಗ | ಪ ಮ ಗ ರಿ ಸ ||

## ಮಿಶ್ರಜಾತಿ ಧ್ರುವತಾಳ

**7 + 2 + 7 + 7 = 23 ಅಕ್ಷರಗಳು.**

4. || ಸ ರಿ ಗ ಮ ಪ ದ ಪ | ಮ ಗ | ಸ ರಿ ಗ ಮ ಪ ಮ ಗ | ಸ ರಿ ಗ ಮ ಪ ದ ನಿ ||

|| ರಿ ಗ ಮ ಪ ದ ನಿ ದ | ಪ ಮ | ರಿ ಗ ಮ ಪ ದ ಪ ಮ | ರಿ ಗ ಮ ಪ ದ ನಿ ಸ ||

|| ಸ ನಿ ದ ಪ ಮ ಗ ಮ | ಪ ದ | ಸ ನಿ ದ ಪ ಮ ಪ ದ | ಸ ನಿ ದ ಪ ಮ ಗ ರಿ ||

|| ನಿ ದ ಪ ಮ ಗ ರಿ ಗ | ಮ ಪ | ನಿ ದ ಪ ಮ ಗ ಮ ಪ | ನಿ ದ ಪ ಮ ಗ ರಿ ಸ ||

## ಸಂಕೀರ್ಣಜಾತಿ ಧ್ರುವತಾಳ

9 + 2 + 9 + 9 = 29 ಅಕ್ಷರಗಳು.

1. ॥ ಸಾ ರೀ ಗಾ ಮ ಪ ದ । ಪ ಮ । ಸಾ ರೀ ಗಾ ಮ ಪ ಮ । ಸಾ ರೀ ಗಾ ಮ ಪ ದ ॥
॥ ರೀ ಗಾ ಮಾ ಪ ದ ನಿ । ದ ಪ । ರೀ ಗಾ ಮಾ ಪ ದ ಪ । ರೀ ಗಾ ಮಾ ಪ ದ ನಿ ॥
॥ ಗಾ ಮಾ ಪಾ ದ ನಿ ಸ । ನಿ ದ । ಗಾ ಮಾ ಪಾ ದ ನಿ ದ । ಗಾ ಮಾ ಪಾ ದ ನಿ ಸ ॥
॥ ಸಾ ನೀ ದಾ ಪ ಮ ಗ । ಮ ಪ । ಸಾ ನೀ ದಾ ಪ ಮ ಪ । ಸಾ ನೀ ದಾ ಪ ಮ ಗ ॥
॥ ನೀ ದಾ ಪಾ ಮ ಗ ರಿ । ಗ ಮ । ನೀ ದಾ ಪಾ ಮ ಗ ಮ । ನೀ ದಾ ಪಾ ಮ ಗ ರಿ ॥
॥ ದಾ ಪಾ ಮಾ ಗ ರಿ ಸ । ರಿ ಗ । ದಾ ಪಾ ಮಾ ಗ ರಿ ಗ । ದಾ ಪಾ ಮಾ ಗ ರಿ ಸ ॥

## ತಿಶ್ರಜಾತಿ ಮಠ್ಯತಾಳ

ಅಂಗಗಳು : 1 ಲಘು, 1 ದ್ರುತ, 1 ಲಘು

3 + 2 + 3 = 8 ಅಕ್ಷರಗಳು.

1. ॥ ಸ ರಿ ಗ । ಸ ರಿ । ಗ ಮ ಪ ॥ ರಿ ಗ ಮ । ರಿ ಗ । ಮ ಪ ದ ॥
॥ ಗ ಮ ಪ । ಗ ಮ । ಪ ದ ನಿ ॥ ಮ ಪ ದ । ಮ ಪ । ದ ನಿ ಸ ॥
॥ ಸ ನಿ ದ । ಸ ನಿ । ದ ಪ ಮ ॥ ನಿ ದ ಪ । ನಿ ದ । ಪ ಮ ಗ ॥
॥ ದ ಪ ಮ । ದ ಪ । ಮ ಗ ರಿ ॥ ಪ ಮ ಗ । ಪ ಮ । ಗ ರಿ ಸ ॥

### ಚತುರಶ್ರಜಾತಿ ಮಠ್ಯತಾಳ

4 + 2 + 4 = 10 ಅಕ್ಷರಗಳು.

1. ॥ ಸ ರಿ ಗ ರಿ । ಸ ರಿ । ಸ ರಿ ಗ ಮ ॥ ರಿ ಗ ಮ ಗ । ರಿ ಗ । ರಿ ಗ ಮ ಪ ॥

॥ ಗ ಮ ಪ ಮ । ಗ ಮ । ಗ ಮ ಪ ದ ॥ ಮ ಪ ದ ಪ । ಮ ಪ । ಮ ಪ ದ ನಿ ॥

॥ ಪ ದ ನಿ ದ । ಪ ದ । ಪ ದ ನಿ ಸ ॥ ಸ ನಿ ದ ನಿ । ಸ ನಿ । ಸ ನಿ ದ ಪ ॥

॥ ನಿ ದ ಪ ದ । ನಿ ದ । ನಿ ದ ಪ ಮ ॥ ದ ಪ ಮ ಪ । ದ ಪ । ದ ಪ ಮ ಗ ॥

॥ ಪ ಮ ಗ ಮ । ಪ ಮ । ಪ ಮ ಗ ರಿ ॥ ಮ ಗ ರಿ ಗ । ಮ ಗ । ಮ ಗ ರಿ ಸ ॥

### ಖಂಡಜಾತಿ ಮಠ್ಯತಾಳ

5 + 2 + 5 = 12 ಅಕ್ಷರಗಳು.

1. ॥ ಸ ರಿ ಗ ಮ ಗ । ರಿ ಗ । ಸ ರಿ ಗ ಮ ಪ ॥

॥ ರಿ ಗ ಮ ಪ ಮ । ಗ ಮ । ರಿ ಗ ಮ ಪ ದ ॥

॥ ಗ ಮ ಪ ದ ಪ । ಮ ಪ । ಗ ಮ ಪ ದ ನಿ ॥

॥ ಮ ಪ ದ ನಿ ದ । ಪ ದ । ಮ ಪ ದ ನಿ ಸ ॥

॥ ಸ ನಿ ದ ಪ ದ । ನಿ ದ । ಸ ನಿ ದ ಪ ಮ ॥

॥ ನಿ ದ ಪ ಮ ಪ । ದ ಪ । ನಿ ದ ಪ ಮ ಗ ॥

॥ ದ ಪ ಮ ಗ ಮ । ಪ ಮ । ದ ಪ ಮ ಗ ರಿ ॥

॥ ಪ ಮ ಗ ರಿ ಗ । ಮ ಗ । ಪ ಮ ಗ ರಿ ಸ ॥

## ಮಿಶ್ರಜಾತಿ ಮಠ್ಯತಾಳ

7 + 2 + 7 = 16 ಅಕ್ಷರಗಳು.

1. ॥ ಸ ರಿ ಗ ಮ ಪ ದ ಪ । ಮ ಗ । ಸ ರಿ ಗ ಮ ಪ ದ ನಿ ॥

॥ ರಿ ಗ ಮ ಪ ದ ನಿ ದ । ಪ ಮ । ರಿ ಗ ಮ ಪ ದ ನಿ ಸ ॥

॥ ಸ ನಿ ದ ಪ ಮ ಗ ಮ । ಪ ದ । ಸ ನಿ ದ ಪ ಮ ಗ ರಿ ॥

॥ ನಿ ದ ಪ ಮ ಗ ರಿ ಗ । ಮ ಪ । ನಿ ದ ಪ ಮ ಗ ರಿ ಸ ॥

## ಸಂಕೀರ್ಣಜಾತಿ ಮಠ್ಯತಾಳ

9 + 2 + 9 = 20 ಅಕ್ಷರಗಳು.

1. ॥ ಸಾ ರೀ ಗಾ ಮ ಪ ಮ । ಗ ಮ । ಸಾ ರೀ ಗಾ ಮ ಪ ದ ॥

॥ ರೀ ಗಾ ಮಾ ಪ ದ ಪ । ಮ ಪ । ರೀ ಗಾ ಮಾ ಪ ದ ನಿ ॥

॥ ಗಾ ಮಾ ಪಾ ದ ನಿ ದ । ಪ ದ । ಗಾ ಮಾ ಪಾ ದ ನಿ ಸ ॥

॥ ಸಾ ನೀ ದಾ ಪ ಮ ಪ । ದ ಪ । ಸಾ ನೀ ದಾ ಪ ಮ ಗ ॥

॥ ನೀ ದಾ ಪಾ ಮ ಗ ಮ । ಪ ಮ । ನೀ ದಾ ಪಾ ಮ ಗ ರಿ ॥

॥ ದಾ ಪಾ ಮಾ ಗ ರಿ ಗ । ಮ ಗ । ದಾ ಪಾ ಮಾ ಗ ರಿ ಸ ॥

### ತಿಶ್ರಜಾತಿ ರೂಪಕತಾಳ

**ಅಂಗಗಳು : 1 ದ್ರುತ, 1 ಲಘು.**

**2 + 3 = 5 ಅಕ್ಷರಗಳು.**

1. ॥ ಸ ರಿ । ಗ ಮ ಪ ॥ ರಿ ಗ । ಮ ಪ ದ ॥

   ॥ ಗ ಮ । ಪ ದ ನಿ ॥ ಮ ಪ । ದ ನಿ ಸ ॥

   ॥ ಸ ನಿ । ದ ಪ ಮ ॥ ನಿ ದ । ಪ ಮ ಗ ॥

   ॥ ದ ಪ । ಮ ಗ ರಿ ॥ ಪ ಮ । ಗ ರಿ ಸ ॥

### ಚತುರಶ್ರಜಾತಿ ರೂಪಕತಾಳ

**ಅಂಗಗಳು : 1 ದ್ರುತ, 1 ಲಘು.**

**2 + 4 = 6 ಅಕ್ಷರಗಳು.**

1. ॥ ಸ ರಿ । ಸ ರಿ ಗ ಮ ॥ ರಿ ಗ । ರಿ ಗ ಮ ಪ ॥

   ॥ ಗ ಮ । ಗ ಮ ಪ ದ ॥ ಮ ಪ । ಮ ಪ ದ ನಿ ॥

   ॥ ಪ ದ । ಪ ದ ನಿ ಸ ॥ ಸ ನಿ । ಸ ನಿ ದ ಪ ॥

   ॥ ನಿ ದ । ನಿ ದ ಪ ಮ ॥ ದ ಪ । ದ ಪ ಮ ಗ ॥

   ॥ ಪ ಮ । ಪ ಮ ಗ ರಿ ॥ ಮ ಗ । ಮ ಗ ರಿ ಸ ॥

### ಖಂಡ ಜಾತಿ ರೂಪಕತಾಳ

**2 + 5 = 7 ಅಕ್ಷರಗಳು.**

1. ॥ ಸ ರಿ । ಸ ರಿ ಗ ಮ ಪ ॥ ರಿ ಗ । ರಿ ಗ ಮ ಪ ದ ॥ ಗ ಮ । ಗ ಮ ಪ ದ ನಿ ॥

   ॥ ಮ ಪ । ಮ ಪ ದ ನಿ ಸ ॥ ಸ ನಿ । ಸ ನಿ ದ ಪ ಮ ॥ ನಿ ದ । ನಿ ದ ಪ ಮ ಗ ॥

   ॥ ದ ಪ । ದ ಪ ಮ ಗ ರಿ ॥ ಪ ಮ । ಪ ಮ ಗ ರಿ ಸ ॥

## ಮಿಶ್ರಜಾತಿ ರೂಪಕತಾಳ

2 + 7 = 9 ಅಕ್ಷರಗಳು.

1. ॥ ಸ ರಿ । ಸ ರಿ ಗ ಮ ಪ ದ ನಿ ॥

॥ ರಿ ಗ । ರಿ ಗ ಮ ಪ ದ ನಿ ಸ಼ ॥

॥ ಸ಼ ನಿ । ಸ಼ ನಿ ದ ಪ ಮ ಗ ರಿ ॥

॥ ನಿ ದ । ನಿ ದ ಪ ಮ ಗ ರಿ ಸ ॥

## ಸಂಕೀರ್ಣಜಾತಿ ರೂಪಕತಾಳ

2 + 9 = 11 ಅಕ್ಷರಗಳು.

1. ॥ ಸ ರಿ । ಸಾ ರೀ ಗಾ ಮ ಪ ದ ॥ ರಿ ಗ । ರೀ ಗಾ ಮಾ ಪ ದ ನಿ ॥

॥ ಗ ಮ । ಗಾ ಮಾ ಪಾ ದ ನಿ ಸ಼ ॥ ಸ಼ ನಿ । ಸಾ಼ ನೀ ದಾ ಪ ಮ ಗ ॥

॥ ನಿ ದ । ನೀ ದಾ ಪಾ ಮ ಗ ರಿ ॥ ದ ಪ । ದಾ ಪಾ ಮಾ ಗ ರಿ ಸ ॥

## ತಿಶ್ರಜಾತಿ ಝಂಪೆ ತಾಳ

ಅಂಗಗಳು : 1 ಲಘು, 1 ಅನುದ್ರುತ, 1 ದ್ರುತ.

3 + 1 + 2 = 6 ಅಕ್ಷರಗಳು.

1. ॥ ಸ ರಿ ಗ । ರಿ । ಗಾ ॥ ರಿ ಗ ಮ । ಗ । ಮಾ ॥

॥ ಗ ಮ ಪ । ಮ । ಪಾ ॥ ಮ ಪ ದ । ಪ । ದಾ ॥

॥ ಪ ದ ನಿ । ದ । ನೀ ॥ ದ ನಿ ಸ಼ । ನಿ । ಸಾ಼ ॥

॥ ಸ಼ ನಿ ದ । ನಿ । ದಾ ॥ ನಿ ದ ಪ । ದ । ಪಾ ॥

॥ ದ ಪ ಮ । ಪ । ಮಾ ॥ ಪ ಮ ಗ । ಮ । ಗಾ ॥

॥ ಮ ಗ ರಿ । ಗ । ರೀ ॥ ಗ ರಿ ಸ । ರಿ । ಸಾ ॥

### ಚತುರಶ್ರ ಜಾತಿ ಝಂಪೆ ತಾಳ

4 + 1 + 2 = 7 ಅಕ್ಷರಗಳು.

1. ॥ ಸ ರಿ ಗ ರಿ । ಗ । ಮಾ ॥ ರಿ ಗ ಮ ಗ । ಮ । ಪಾ ॥
॥ ಗ ಮ ಪ ಮ । ಪ । ದಾ ॥ ಮ ಪ ದ ಪ । ದ । ನೀ ॥
॥ ಪ ದ ನಿ ದ । ನಿ । ಸಾ ॥ ಸ ನಿ ದ ನಿ । ದ । ಪಾ ॥
॥ ನಿ ದ ಪ ದ । ಪ । ಮಾ ॥ ದ ಪ ಮ ಪ । ಮ । ಗಾ ॥
॥ ಪ ಮ ಗ ಮ । ಗ । ರೀ ॥ ಮ ಗ ರಿ ಗ । ರಿ । ಸಾ ॥

### ಖಂಡ ಜಾತಿ ಝಂಪೆ ತಾಳ

5 + 1 + 2 = 8 ಅಕ್ಷರಗಳು.

1. ॥ ಸ ರಿ ಗ ಸ ರಿ । ಗ । ಮಾ ॥ ರಿ ಗ ಮ ರಿ ಗ । ಮ । ಪಾ ॥
॥ ಗ ಮ ಪ ಗ ಮ । ಪ । ದಾ ॥ ಮ ಪ ದ ಮ ಪ । ದ । ನೀ ॥
॥ ಪ ದ ನಿ ಪ ದ । ನಿ । ಸಾ ॥ ಸ ನಿ ದ ಸ ನಿ । ದ । ಪಾ ॥
॥ ನಿ ದ ಪ ನಿ ದ । ಪ । ಮಾ ॥ ದ ಪ ಮ ದ ಪ । ಮ । ಗಾ ॥
॥ ಪ ಮ ಗ ಪ ಮ । ಗ । ರೀ ॥ ಮ ಗ ರಿ ಮ ಗ । ರಿ । ಸಾ ॥

### ಮಿಶ್ರ ಜಾತಿ ಝಂಪೆ ತಾಳ

7 + 1 + 2 = 10 ಅಕ್ಷರಗಳು.

1. ॥ ಸ ರಿ ಗ ಸ ರಿ ಸ ರಿ । ಗ । ಮಾ ॥ ರಿ ಗ ಮ ರಿ ಗ ರಿ ಗ । ಮ । ಪಾ ॥
॥ ಗ ಮ ಪ ಗ ಮ ಗ ಮ । ಪ । ದಾ ॥ ಮ ಪ ದ ಮ ಪ ಮ ಪ । ದ । ನೀ ॥
॥ ಪ ದ ನಿ ಪ ದ ಪ ದ । ನಿ । ಸಾ ॥ ಸ ನಿ ದ ಸ ನಿ ಸ ನಿ । ದ । ಪಾ ॥
॥ ನಿ ದ ಪ ನಿ ದ ನಿ ದ । ಪ । ಮಾ ॥ ದ ಪ ಮ ದ ಪ ದ ಪ । ಮ । ಗಾ ॥
॥ ಪ ಮ ಗ ಪ ಮ ಪ ಮ । ಗ । ರೀ ॥ ಮ ಗ ರಿ ಮ ಗ ಮ ಗ । ರಿ । ಸಾ ॥

### ಸಂಕೀರ್ಣ ಜಾತಿ ಝಂಪೆ ತಾಳ

9 + 1 + 2 = 12 ಅಕ್ಷರಗಳು.

1. ॥ ಸಾ ರೀ ಗಾ ಮ ಪ ಮ । ಪ । ದಾ ॥ ರೀ ಗಾ ಮಾ ಪ ದ ಪ । ದ । ನೀ ॥

॥ ಗಾ ಮಾ ಪಾ ದ ನಿ ದ । ನಿ । ಸಾ ॥ ಸಾ ನೀ ದಾ ಪ ಮ ಪ । ಮ । ಗಾ ॥

॥ ನೀ ದಾಪಾ ಮ ಗ ಮ । ಗ । ರೀ ॥ ದಾ ಪಾ ಮಾ ಗ ರಿ ಗ । ರಿ । ಸಾ ॥

### ತಿಶ್ರಜಾತಿ ತ್ರಿಪುಟ ತಾಳ

ಅಂಗಗಳು : 1 ಲಘು, 2 ದ್ರುತ.

3 + 2 + 2 = 7 ಅಕ್ಷರಗಳು.

1. ॥ ಸ ರಿ ಗ । ಸ ರಿ । ಗ ಮ ॥ ರಿ ಗ ಮ । ರಿ ಗ । ಮ ಪ ॥

॥ ಗ ಮ ಪ । ಗ ಮ । ಪ ದ ॥ ಮ ಪ ದ । ಮ ಪ । ದ ನಿ ॥

॥ ಪ ದ ನಿ । ಪ ದ । ನಿ ಸ ॥ ಸ ನಿ ದ । ಸ ನಿ । ದ ಪ ॥

॥ ನಿ ದ ಪ । ನಿ ದ । ಪ ಮ ॥ ದ ಪ ಮ । ದ ಪ । ಮ ಗ ॥

॥ ಪ ಮ ಗ । ಪ ಮ । ಗ ರಿ ॥ ಮ ಗ ರಿ । ಮ ಗ । ರಿ ಸ ॥

### ಚತುರಶ್ರಜಾತಿ ತ್ರಿಪುಟ ತಾಳ

4 + 2 + 2 = 8 ಅಕ್ಷರಗಳು.

1. ॥ ಸ ರಿ ಗ ರಿ । ಸ ರಿ । ಗ ಮ ॥ ರಿ ಗ ಮ ಗ । ರಿ ಗ । ಮ ಪ ॥

॥ ಗ ಮ ಪ ಮ । ಗ ಮ । ಪ ದ ॥ ಮ ಪ ದ ಪ । ಮ ಪ । ದ ನಿ ॥

॥ ಪ ದ ನಿ ದ । ಪ ದ । ನಿ ಸ ॥ ಸ ನಿ ದ ನಿ । ಸ ನಿ । ದ ಪ ॥

॥ ನಿ ದ ಪ ದ । ನಿ ದ । ಪ ಮ ॥ ದ ಪ ಮ ಪ । ದ ಪ । ಮ ಗ ॥

॥ ಪ ಮ ಗ ಮ । ಪ ಮ । ಗ ರಿ ॥ ಮ ಗ ರಿ ಗ । ಮ ಗ । ರಿ ಸ ॥

## ಖಂಡಜಾತಿ ತ್ರಿಪುಟ ತಾಳ

**5 + 2 + 2 = 9 ಅಕ್ಷರಗಳು.**

1. ॥ ಸ ರಿ ಗ ಮ ಪ । ರಿ ಗ । ಮ ಪ ॥ ರಿ ಗ ಮ ಪ ದ । ಗ ಮ । ಪ ದ ॥
   ॥ ಗ ಮ ಪ ದ ನಿ । ಮ ಪ । ದ ನಿ ॥ ಮ ಪ ದ ನಿ ಸ̇ । ಪ ದ । ನಿ ಸ̇ ॥
   ॥ ಸ̇ ನಿ ದ ಪ ಮ । ನಿ ದ । ಪ ಮ ॥ ನಿ ದ ಪ ಮ ಗ । ದ ಪ । ಮ ಗ ॥
   ॥ ದ ಪ ಮ ಗ ರಿ । ಪ ಮ । ಗ ರಿ ॥ ಪ ಮ ಗ ರಿ ಸ । ಮ ಗ । ರಿ ಸ ॥

## ಮಿಶ್ರ ಜಾತಿ ತ್ರಿಪುಟ ತಾಳ

**7 + 2 + 2 = 11 ಅಕ್ಷರಗಳು.**

1. ॥ ಸ ರಿ ಗ ಮ ಪ ದ ನಿ । ಮ ಪ । ದ ನಿ ॥
   ॥ ರಿ ಗ ಮ ಪ ದ ನಿ ಸ̇ । ಪ ದ । ನಿ ಸ̇ ॥
   ॥ ಸ̇ ನಿ ದ ಪ ಮ ಗ ರಿ । ಪ ಮ । ಗ ರಿ ॥
   ॥ ನಿ ದ ಪ ಮ ಗ ರಿ ಸ । ಮ ಗ । ರಿ ಸ ॥

## ಸಂಕೀರ್ಣ ಜಾತಿ ತ್ರಿಪುಟ ತಾಳ

**9 + 2 + 2 = 13 ಅಕ್ಷರಗಳು.**

1. ॥ ಸಾ ರೀ ಗಾ ಮ ಪ ದ । ಮ ಪ । ದ ನಿ ॥
   ॥ ರೀ ಗಾ ಮಾ ಪ ದ ನಿ । ಪ ದ । ನಿಸ̇ ॥
   ॥ ಸ̇ಾ ನೀ ದಾ ಪ ಮ ಗ । ಪ ಮ । ಗ ರಿ ॥
   ॥ ನೀ ದಾ ಪಾಮ ಗ ರಿ । ಮ ಗ । ರಿ ಸ ॥

### ತಿಶ್ರ ಜಾತಿ ಅಟ ತಾಳ

ಅಂಗಗಳು : 2 ಲಘು, 2 ದ್ರುತ.

3 + 3 + 2 + 2 = 10 ಅಕ್ಷರಗಳು.

1. ॥ ಸ ರಿ ಗ । ರಿ ಗ ಮ । ಪಾ । ಪಾ ॥ ರಿ ಗ ಮ । ಗ ಮ ಪ । ದಾ । ದಾ ॥
॥ ಗ ಮ ಪ । ಮ ಪ ದ । ನೀ । ನೀ ॥ ಮ ಪ ದ । ಪ ದ ನಿ । ಸಾ । ಸಾ ॥
॥ ಸ ನಿ ದ । ನಿ ದ ಪ । ಮಾ । ಮಾ ॥ ನಿ ದ ಪ । ದ ಪ ಮ । ಗಾ । ಗಾ ॥
॥ ದ ಪ ಮ । ಪ ಮ ಗ । ರೀ । ರೀ ॥ ಪ ಮ ಗ । ಮ ಗ ರಿ । ಸಾ । ಸಾ ॥

### ಚತುರಶ್ರ ಜಾತಿ ಅಟ ತಾಳ

4 + 4 + 2 + 2 = 12 ಅಕ್ಷರಗಳು.

1. ॥ ಸ ರಿ ಗ ಮ । ಸ ರಿ ಗ ಮ । ಪಾ । ಪಾ ॥ ರಿ ಗ ಮ ಪ । ರಿ ಗ ಮ ಪ । ದಾ । ದಾ ॥
॥ ಗ ಮ ಪ ದ । ಗ ಮ ಪ ದ । ನೀ । ನೀ ॥ ಮ ಪ ದ ನಿ । ಮ ಪ ದ ನಿ । ಸಾ । ಸಾ ॥
॥ ಸ ನಿ ದ ಪ । ಸ ನಿ ದ ಪ । ಮಾ । ಮಾ ॥ ನಿ ದ ಪ ಮ । ನಿ ದ ಪ ಮ । ಗಾ । ಗಾ ॥
॥ ದ ಪ ಮ ಗ । ದ ಪ ಮ ಗ । ರೀ । ರೀ ॥ ಪ ಮ ಗ ರಿ । ಪ ಮ ಗ ರಿ । ಸಾ । ಸಾ ॥

### ಖಂಡ ಜಾತಿ ಅಟ ತಾಳ

5 + 5 + 2 + 2 = 14 ಅಕ್ಷರಗಳು.

1. ॥ ಸ ರೀ ಗಾ । ಸಾ ರಿ ಗಾ । ಮಾಮಾ ॥ ರಿ ಗಾ ಮಾ । ರೀ ಗ ಮಾ । ಪಾ । ಪಾ ॥
॥ ಗ ಮಾ ಪಾ । ಗಾ ಮ ಪಾ । ದಾ ದಾ ॥ ಮ ಪಾ ದಾ । ಮಾ ಪ ದಾ । ನೀ । ನೀ ॥
॥ ಪ ದಾ ನೀ । ಪಾ ದ ನೀ । ಸಾ ಸಾ ॥ ಸ ನೀ ದಾ । ಸಾ ನಿ ದಾ । ಪಾ । ಪಾ ॥
॥ ನಿ ದಾ ಪಾ । ನೀ ದ ಪಾ । ಮಾಮಾ ॥ ದ ಪಾ ಮಾ । ದಾ ಪ ಮಾ । ಗಾ । ಗಾ ॥
॥ ಪ ಮಾ ಗಾ । ಪಾ ಮ ಗಾ । ರೀ ರೀ ॥ ಮ ಗಾ ರೀ । ಮಾ ಗ ರೀ । ಸಾ । ಸಾ ॥

ರಾಗ - ಕೇದಾರಗೌಳ - ರೂಪಕ

ಪಲ್ಲವಿ

1. ನೀ ದ ಪಮಗ ॥ ರಿರಿ ಗರಿಸಾ ನಿಸರಿಗ ॥

ನೀ ಲ ಕಂ . ॥ ಠಂ. ಭ.ಜೇ . . . ॥

/ಸಾ ರಿಸನಿದ ದಪ॥ , ನಿಸ ರಿಮಗ ॥ ಗಸರಿಮಪನಿ ॥

ಹಂ ಸ. ತ. ತಂ ॥ . ನೀರ ಜಾ.ಸ ॥ ನಾ.ದಿನುತಂ ॥

2. ರಿಸನೀದಾ ದಪಮಾಗಾ ॥ ರಿರಿಗರಿಸಾ ನಿಸರಿಗ ॥

ನೀ ..ಲ ಕಂ . . ॥ ಠಂಭ.ಜೇ ॥ . . . .॥

ಸಾ ರಿಸನಿದ ದಪ ॥ ,ನಿಸ ರಿಮಗ ॥ ಗಸ ರಿಮಪನಿ ॥

ಹಂ ಸ. ತ . ತಂ ॥ ನೀರ ಜಾ.ಸ ॥ ನಾ. ದಿನುತಂ ॥

ಸನಿದ ಪಮಗ ॥ ರಿರಿ ಗರಿಸಾ ಸಾ ॥

ನೀ. ಲ ಕಂ . ॥ ಠಂ ಭ. ಜೇ . ॥

ಅನುಪಲ್ಲವಿ

, ಪಮ ಗಸರಿ ॥ ಪ/ಮಾ ಪದಪಾ ॥

- ಬಾಲಕುಚಾಂ ॥ ಬಾ ಸಹಿತಂ ॥

, ಪಮಪಾ ಸನಿನಿದಪಾ ॥ ಪಸನಿಸಾ ॥

- ಬಾಲ ಚಂ .. ದ್ರ ॥ ಸೇ.ವಿತಂ ॥

ನಿ ಸ ರಿ ಗ ರಿ ಸ ॥ ನಿಸರೀ ಸಾ ರಿಸನಿದಪಾ ॥

ಶೀ ಲ ಗು ರು ಗು ಹ ॥ ಪೂ .. ಜಿ ತಂ . . ॥

ಸಾ ನಿ ರಿಸನಿದಪಾ ॥ ದಪಮಗ ಸಾ; ರಿಮಪನಿ ॥

ಶ್ರೀ ಕ ದಂ .. ಬ ॥ ವ . ನ. ನಾ. ಥಂ . ॥

॥ನೀಲಕಂಠಂ 2ನೇ ಸಂಗತಿ ಮತ್ತು ನಿಲುಗಡೆ ಸಂಗತಿಯನ್ನು ಹಾಡುವುದು.

**ಚರಣ**

, ರಿ ರಿ ರಿ ಮ ಪ ॥ ಮ ಮಗಗರಿ ಮಗಗರಿಸಾ ॥

ಅ ಕ್ಷ ಯ ರೂ . ॥ . ಪಾ. . . ಖಂ .. ಡ ॥

ಸ ನಿ ಸಾ ರೀ ॥ ಸಾ ನಿ ರಿಸನಿದಪಾ ॥

ಕಾ . ವೇ ರೀ ॥ ತೀ . ರೋ. .ತ್ತ ॥

ನಿ ಸ ರಿ ಸ ರೀ ॥ , ಪಪಮಗ ಗಸರೀ ॥

ರಾ . ಭಿ ಮುಖಂ ॥ - ಪಂಚ . ಮು.ಖಂ ॥

, ನಿದಪ ಪಮಗಾ ॥ ಗಾಮರಿ ಮಗಗರಿಸಾ ॥

. ರಕ್ಷಿತ ಭ . . ॥ ಕ್ತ . . ಪ್ರ.ಮು.ಖಂ ॥

. ಮಮಮಮಗಸರೀ ॥ ರಿ ಪ ಮ ಪಾ ॥

. ನ ಕ್ಷ ತ್ರೇ . . ಶ ॥ ಶೇ . ಖ ರಂ ॥

- ಪಮಪಾ ಸನಿನಿದಪಾ॥ ಪ ಪ ಸ ನಿ ಸಾ ॥

. ನಾ .ಮ ರೂ ..ಪ ॥ ವಿ ಚಿ ತ್ರ ತ ರ ॥

- ಸನಿಸಾ ರಿರಿ ರಿಪ ॥ ಮಗರೀ ಮಗಗರಿ ಸಾ ॥

. ದ .ಕ್ಷ ತರ ಮೀ. ॥ . . ಶ್ವ ರಂ.. ಕೇ ॥

ಸನಿಸರಿಸಾ ರಿಸನಿದಪಾ ॥ ದಪಮಗರೀ ರಿಗಾಸ ॥

ದಾ. . ರ ಗೌ . . ಳ ॥ ಪ್ರಿ.ಯ. ಕ ರಂ . ॥

**ಮಧ್ಯಮಕಾಲ ಸಾಹಿತ್ಯ-**

ರೀ ಪಮಗಾ ರಿಮರಿಮಪಾ ॥ ಪಾಮಪ ಸನಿದಪ ಸನಿಸಾ ॥

ದ ಕ್ಷಿ ಣ ಕಾ ಶೀ ..ಪುರಂ ॥ ದಂಡಿತ ಕಾ.ಮ.ತ್ರಿಪುರಂ ॥

ಸನಿಸಾ ಗರಿಸಸಾ ನಿದಪ ॥ ರಿಸಾನಿದ ಪ ಮಗರಿಮಪನಿ ॥

ದ.ಕ್ಷಾ ಧ್ವರಹರಂ ಹರಂ ॥ ದಯಾಕರಂ ಕಮಲ ಕರಂ ॥

**ಚಿಟ್ಟೆಸ್ವರ**

ಸಾನಿದಪಾಮಗರಿಗರಿಸ ॥ ನೀದಪಮಪನಿಸರಿಮಗರಿ ॥

ಮಾ ಪನಿದಪ ಮಪನಿಸರಿರಿ ॥ ಮಗಗರಿ ಸನಿದಪ ನಿನಿಸಾ ॥

ನೀಸರಿ ಮಾಗರಿ ಗಾರಿಸ ॥ ನಿಸರಿಗರಿಸ ನಿರಿಸನಿದಪ ॥

ರಿಸಾನಿದಪ ಮಗಾ ಗರಿಸ ॥ ನಿಸಾ ರಿಮಪನಿಸಾ ರಿಗರಿ ॥ ॥ನೀಲ॥

## ರಾಗ - ಮಲಯಮಾರುತ - ರೂಪಕ ತಾಳ
## ತ್ಯಾಗರಾಜ ಕೃತಿ

**ಆರೋಹಣ** - ಸ ರಿ ಗ ಪ ದ ನಿ ಸ ॥ **ಅವರೋಹಣ** - ಸ ನಿ ದ ಪ ಗ ರಿ ಸ ॥
ಶು. ಅಂ. ಚ ಕೈ

**ಪಲ್ಲವಿ**

ಮನಸಾ ! ಎಟುಲೋರ್ತುನೆನಾ
ಮನವಿನಿಚೇಕೊನವೇ ॥ಮನಸಾ॥

**ಅನುಪಲ್ಲವಿ**

ದಿನಕರಕುಲ ಭೂಷಣುನಿ
ದೀನುಡವೈ ಭಜನ ಜೇಸಿ ।
ದಿನಮು ಗಡುಪುಮನಿನ ನೀವು
ವಿನವದೇಲ ! ಗುಣವಿಹೀನ ॥ಮನಸಾ॥

**ಚರಣ**

ಕಲಿಲೋರಾಜಸತಾಮಸ
ಗುಣಮುಲುಗಲವಾರಿಚೆಲಿಮಿ ।
ಕಲಸಿಮೆಲಸಿತಿರುಗು ಚುಮರಿ
ಕಾಲಮುಗಡ ಪಕನೇ ॥
ಸುಲಭಮುಗಾಕಡತೇರನು
ಸೂಚನಲನು ತೆಲಿಯ ಜೇಯು
ಇಲನುತ್ಯಾಗರಾಜು ಮಾಟ
ವಿನವದೇಲ ? ಗುಣವಿಹೀನ ॥ಮನಸಾ॥

**ಭಾವಾರ್ಥ**

ಅಯೋಗ್ಯ (ವಿವೇಕವಿಲ್ಲದ) ಮನಸ್ಸೆ ! ಇದನ್ನು ಹೇಗೆ ಸಹಿಸಲಿ ? ನನ್ನ ಮಾತನ್ನು ಕೇಳು. ಸೂರ್ಯವಂಶಕ್ಕೆ ಭೂಷಣಪ್ರಾಯನಾಗಿರುವ ಶ್ರೀರಾಮನನ್ನು ಸದಾ ಪೂಜಿಸುವುದನ್ನು ಬಿಟ್ಟು ರಾಜಸತಾಮಸ ಗುಣಗಳಿಂದ ಕೂಡಿದ ಜನರ ಸಹವಾಸದಲ್ಲಿ ಕಾಲವನ್ನ ಕಳೆಯುತ್ತಿರುವೆ. ಬಹು ಸುಲಭವಾಗಿ ಮುಕ್ತಿಯನ್ನು ಪಡೆಯುವ ಮಾರ್ಗವನ್ನು ಅನುಸರಿಸು. ನನ್ನ ಮಾತನ್ನು ಕೇಳು.

**ರಾಗ - ಮಲಯಮಾರುತ - ರೂಪಕತಾಳ**

**ಪಲ್ಲವಿ**

1. ಗಗ ಪಾ,ದ ನಿದ ॥ ಪಾ ॰ ಗ ಪ ಗ ರಿ ಸ ರಿ ॥

ಮನ ಸಾ. ಎಟು ॥ ಲೋ ರ್‍ತು . ನೆ . . . ॥

2. ಗಗ ಪಾ,ದ ನಿದ ॥ ಪದನಿದಪಾ ಗಪಗರಿಸರಿ ॥

ಮನ ಸಾ . ಎಟು ॥ ಲೋ. . . ರ್‍ತು .ನೆ... ॥

3. ಗಪ ದನಿಸಾ ನಿದ ॥ ಪದನಿದಪಾ ಗಪಗರಿಸರಿ ॥

ಮನಸಾ. . ಎಟು ॥ ಲೋ. .ರ್‍ತು ನೆ. ನಾ... ॥

ಗಪದಪ ಪದನೀ ದನಿಸಾ ॥ ಸನಿನಿದಪಾ ಗಪಗರಿಸರಿ ॥

ಮ . . ನ . . ವಿ .ನಿ ॥ ಚೇ . .ಕೊ ನ .ವೇ.. ॥

ಗಪದನಿಸಾ ನಿದ ॥ ಪಾ॰ ಗಪಗರೀ ॥ ಸಾ ॰ ॰ ॰ ॰ ॰ ॥

ಮನಸಾ.. ಎಟು ॥ ಲೋ. ರ್‍ತು . ನೇ ॥ . . . . . . ॥

**ಅನುಪಲ್ಲವಿ**

, ಗಪಾದನೀ ಸನಿ ॥ ಸಾ॰ ಸಗರೀ ಸ ॥

ದಿ ನ ಕ ರ ಕುಲ ॥ ಭೂ .ಷ.ಣು ನಿ ॥

, ಗಪಾದನೀ ಸನಿ ॥ ಸಾ॰ ಸನಿನಿದ ಪಾ ॥

ದಿ ನ ಕ ರ ಕು ಲ ॥ ಭೂ. ಷ. ಣು. ನಿ. ॥

ದಪ x ಗಪಾದನೀ ಸನಿ ॥ ಸಾ॰ ನಿಸರಿಸ ರೀ ॥

x ದಿನ ಕ ರ ಕು ಲ ॥ ಭೂ.ಷ.ಣು.ನಿ ॥

, ಸರೀಗರೀ ಗಾ ॥ ಗಪಗಾರೀ ರಿಗರೀಸ ॥

. ದೀ ನುಡ ವೈ ॥ ಭ.ಜ ನ ಜೇ. .ಸಿ ॥

ರಿ ರಿ ರಿ ರಿ ಗ ರೀ ಸ ॥ ಸನಿನಿದಪಾ ದನಿಸಾಸ ॥

ದಿ ನ ಮು ಗ.ಡು ಪು ॥ ಮ. ನಿ.ನ ನೀ..ವು ॥

ದನಿಸಾನೀ ರಿಸನಿದಪಾ ॥ ಗಪದನಿದಪ ಗಪಗರಿಸರಿ ॥

ವಿ. ನ ವ ದೇ ... ಲ ॥ ಗು. ಣ. ವಿ. ಹೀ. .ನ. ॥

**ಮನಸಾ ಎಟುಲೋರ್‍ತುನೇ 3ನೇ ಸಂಗತಿ ಮತ್ತು ಮನವಿನಿ- ಹಾಡಿ ನಿಲುಗಡೆ ಸಂಗತಿಯಲ್ಲಿ ಮುಗಿಸಬೇಕು.**

**ಚರಣ**

, ಗಗಾಪಾ೦ದಾ ॥ ದದ ಪದನೀ ನಿದ ॥
- ಕಲಿ ಲೋ೦ರಾ ॥ ಜಸ ತಾ. . ಮಸ ॥
ನಿದಪಾ ದಗ ಪಪ ॥ ಗಪಗರಿಸರಿ ಗಪಪ ॥
ಗು-ಣ ಮುಲುಗಲ ॥ ವಾ. ರಿ . ಚೆಲಿಮಿ ॥
, ನಿದಾದಪಪಗ,, ಪದ ॥ ದದ ದನಿಸಾ ನಿದ ॥
- ಕ ಲಿ ಲೋ೦ . ರಾ. ॥ ಜಸ ತಾ . ಮಸ ॥
ನಿದಪಾ ದ ಗ ಪ ಪ ॥ ಗಪಗರಿಸರಿ ಗಪಪ ॥
ಗು-ಣ ಮುಲುಗಲ ॥ ವಾ . . ರಿ.ಚೆಲಿಮಿ ॥
ಪ ಗ ರಿ ಗ ರಿ ಸ ॥ ಸನಿರಿಸನಿದನೀ ಸಸ ॥
ಕ ಲ ಸಿಮೆ ಲ ಸಿ ॥ ತಿ.ರು.ಗು.ಚು ಮರಿ ॥
ಸ ರಿ ಗ ರಿ ಗ ಪ ॥ ದನಿ ನಿದದಾ ದನಿಪಾ ॥
ಕಾ. ಲ ಮುಗಡ ॥ ಪಕ ನೆ . . . . . ॥
, ಗಪಾದ ನಿಸಾ ॥ ನಿದನೀ ಸಸ ॥
-ಸುಲಭ ಮುಗಾ ॥ ಕಡತೇ . ರನು ॥
ಸ ರಿ ಗ ರಿ ಗ ಗ ॥ ಪ ಗ ರಿ ಗ ರಿ ಸ॥
ಸೂ . ಚನಲನು ॥ ತೆಲಿಯಜೇ.ಯು ॥
ರಿ ರಿ ರಿ ರಿಗರೀಸ ॥ ಸನಿನಿದಪಾ ದನಿಸಾಸಾ ॥
ಇಲನು ತ್ಯಾ..ಗ ॥ ರಾ..ಜು ಮಾ. ಟ ॥
ದನಿಸಾನೀ ರಿಸನಿದಪಾ ॥ ಗಪದನಿದಪ ಗಪಗರಿಸರಿ ॥
ವಿ . ನವ ದೇ .. ಲ ॥ ಗು. ಣ.ವಿ. ಹೀ. . ನ. ॥

॥ಮನಸಾ ಕಡೇ ಸಂಗತಿ॥

## ರಾಗ - ದರ್ಬಾರ್ - ಮಿಶ್ರಛಾಪು

### ತ್ಯಾಗರಾಜ ಕೃತಿ

**ಆರೋಹಣ** - ಸ ರಿ ಮ ಪ ದ ನಿ ಸ ॥ **ಅವರೋಹಣ** - ಸ ನಿ ದ ಪ ಮ ರಿ ಗಾ ಗಾ ರಿ ಸ ॥

ಚ. ಶು. ಚ. ಕೈ. ಸಾ.

**ಪಲ್ಲವಿ**

ರಾಮಾಭಿರಾಮ ರಮಣೀಯನಾಮ ॥

ಸಾಮಜರಿಪುಭೀಮ ಸಾಕೇತಧಾಮ ॥ ॥ರಾ॥

**ಚರಣಗಳು - 6. ಕೊನೆಯ ಚರಣದ ಸಾಹಿತ್ಯ**

ನೀಕೇದಯ ಪುಟ್ಟಿ ನೀವು ಬ್ರೋವವಲೆ ॥

ರಾಕೇಂದು ಮುಖ ತ್ಯಾಗರಾಜ ವರದಶ್ರೀ ॥ ॥ರಾ॥

**ಭಾವಾರ್ಥ**

ರಾಮ! ನಾನು ನಿನ್ನಲ್ಲಿಗೆ ಬರಲು ತವಕಪಡುತ್ತಿದ್ದೇನೆ. ಹೇ ಸಾಕೇತವಾಸ ! ನೀನಾಗಿಯೇ ನನ್ನಲ್ಲಿ ಕರುಣೆ ತೋರಿ ಕಾಪಾಡಬೇಕು.

ಸೂಚನೆ - ಪಲ್ಲವಿಯ 2ನೇ ಪಾದಸಾಹಿತ್ಯವನ್ನು ಅನುಪಲ್ಲವಿಯಂತೆ ಹಾಡುವುದು ರೂಢಿ.

## ರಾಗ - ದರ್ಬಾರ್ - ಮಿಶ್ರಛಾಪು

**ಪಲ್ಲವಿ**

; ರೀ; ಪಮರೀ ಗಗರಿಸ ॥ ರೀ ೯ ಮಾ೯ ಪಾ; ಪಾ ; ॥

. ರಾ.ಮಾ . . ಭಿ . . ॥ ರಾ . . ಮ . ॥

- ಮಾಪಾ ದಾನೀಪಾ ; ॥ ಪಮದಪಮರಿ ರಿಮರಿಮಸರೀಸ ॥

. ರ ಮ ಣೀ . ಯ. ॥ ನಾ . . . ಮ . . . ॥

2. -ರೀಮ ಪದಪಾ ಮರಿಗಗರಿಸ ॥ ರೀಮಾ ಪಾ; ಪಾ; ॥

.ರಾ .. ಮ . . ಭಿ . . ॥ ರಾ . . ಮ . ॥

- ಮಾಪಾ ದನಿ ಸಾರಿಸ ನಿಸದಪ ॥ ಮಪದನೀಪ ದಪಮರಿಗಗರಿಸ ॥

. ರ ಮ ಣೀ . . . ಯ . ॥ ನಾ . . . ಮ . . . . .॥

3. ನಿಸ x ಮರಿಪಮ ದಪಮರಿ ಗಗರಿಸ ॥ ರಿಮಪದನಿಸ ಸನಿರಿಸ ನಿಸದಪ ॥

. . x ರಾ . . ಮಾ . ಭಿ . ॥ ರಾ. . . . .ಮ . . . ॥

ದಪಮಪದಪದನಿಸರಿ ಗಗರಿಸ ॥ ರಿಸನಿಸದಪ ದಪಮರಿ ಗಗರಿಸ ॥

ರ . ಮ . . ಣೀ .. ಯ . ॥ ನಾ . . . ಮ . . . . ॥

ನಿಸ x

.. x ರಾಮಾಭಿರಾಮ - 1ನೇ ಸಂಗತಿ.

## ಅನುಪಲ್ಲವಿ

; ದಾನೀ ಸಾ; ಸಾ; ॥ ದನಿ ಸಾರಿಸ ನಿಸ ಪಾದಾಪಾ; ॥

. ಸಾ . ಮ . ಜ. ॥ ರಿ . ಪು . . ಭೀ . ಮ ॥

2. -ದಾನೀ ಸರೀಸ ಸಾ; ॥ ದನಿಸಾರಿಸ ನಿಸದಪ ಮಪದಾ; ॥

. ಸಾ . ಮ . ಜ . ॥ ರಿ.ಪು . . . ಭೀ . . ಮ . ॥

3. -ದಾನೀ ಸರೀಸ ಸಾ; ॥ ದನಿ ಸಾರಿಸ ನಿಸ ಪಾದಾಪಾ; ॥

.ಸಾ . ಮ . ಜ . ॥ ರಿ . ಪು . . . ಭೀ . ಮ. ॥

-ಮಾಪಾ ದಾನೀಪೇ; ॥ ಪಮದಪಮರಿ ರಿಮರಿಮ ಸರೀಸ ॥

.ಸಾ . ಕೇ. ತ . ॥ ಧಾ . . . ಮ . . . ॥

4. - ರೀ; ಪಮರೀ ಸರೀಸ ॥ ದನಿ ಸಾರಿಸ ನಿಸ ದಪಮಪ ದನಿಸರಿ ॥

. ಸಾ .ಮ . . ಜ . ॥ ರಿ.ಪು . . ಭೀ . ಮ . ॥

ಗಾಗಾ ರಿಸ ನಿಸದಪ ದನಿಸರಿ ॥ ರಿಮಪದನಿಸ ಪದನಿಪ ಮರಿಗಗ ॥

ಸಾ . . ಕೇ . ತ . ॥ ಧಾ . . . ಮ . . . . . ॥

ರಿಸ x

.. x ರಾಮಾಭಿರಾಮ - 3ನೇ ಸಂಗತಿ ಮತ್ತು 1ನೇ ಸಂಗತಿಯನ್ನು ಹಾಡುವುದು.

**ಚರಣ**

ಚರಣದ ಮೊದಲನೇ ಪಾದ ಸಾಹಿತ್ಯವನ್ನು ಪಲ್ಲವಿಯ ಮೊದಲನೇ ಸಂಗತಿಯಂತೆ ಹಾಡುವುದು.

ನೀಕೇದಯ ಪುಟ್ಟಿ ನೀವು ಬ್ರೋವವಲೆ ॥

ರಾಕೇಂದು ಮುಖ ತ್ಯಾಗರಾಜ ವರದಶ್ರೀ ॥ ॥ರಾ॥

ಎರಡನೇ ಪಾದ ಸಾಹಿತ್ಯವನ್ನು ಸಾಮಜರಿಪು ಭೀಮ

ಎಂಬ ಸಾಹಿತ್ಯ ಭಾಗದಂತೆ ಹಾಡುವುದು.

## ರಾಗ - ಸರಸ್ವತಿ - ರೂಪಕ

### ತ್ಯಾಗರಾಜರ ಕೃತಿ

**ಆರೋಹಣ** - ಸ ರಿ ಮ ಪ ದ ಸ ॥ (ರಿ ಚ, ಮ ಪ್ರ, ದ ಚ)  **ಅವರೋಹಣ** - ಸ ನಿ ದ ಪ ಮ ರಿ ಸ ॥ (ನಿ ಕೈ)

**ಪಲ್ಲವಿ**

ಅನುರಾಗಮುಲೇನಿ ಮನಸುನಸುಜ್ಞಾನಮುರಾದು ।   ॥ಅನು॥

**ಅನುಪಲ್ಲವಿ**

ಘನುಲೈನ ಅಂತರ ಜ್ಞಾನುಲಕೆರುಕೇಗಾನಿ   ॥ಅನು॥

**ಚರಣ**

ವಗವಗಾಭುಜಿಯಿಂಚು ವಾರಿಕಿತೃಪ್ತಿಯೌರೀತಿ ॥

ಸಗುಣಧ್ಯಾನಮುಪೈನಿ ಸೌಖ್ಯಮುತ್ಯಾಗರಾಜವಿನುತ ॥ ॥ಅನು॥

**ಭಾವಾರ್ಥ**

ಭಕ್ತಿಯಿಲ್ಲದೆ ಮನಸ್ಸಿನಲ್ಲಿ ದೈವಿಕ ಜ್ಞಾನ ಅಥವಾ ಸುಜ್ಞಾನ ಬರಲಾರದು. ಮಹಾ ಜ್ಞಾನಿಗಳು ಈ ತತ್ವವನ್ನು ಚೆನ್ನಾಗಿ ತಿಳಿದಿದ್ದಾರೆ. ಬಗೆಬಗೆಯ ಭಕ್ಷ್ಯ ಭೋಜ್ಯಗಳಿಂದ ತೃಪ್ತನಾದ ಮನುಷ್ಯನಂತೆ ಭಗವಂತನ ಕಲ್ಯಾಣ ಗುಣಗಳನ್ನು ಧ್ಯಾನಿಸುತ್ತಾ ಸಗುಣೋಪಾಸನೆಯನ್ನು ಮಾಡುವವರಿಗೆ ಮಾತ್ರ ಸುಖವುಂಟಾಗುತ್ತದೆ.

## ರಾಗ - ಸರಸ್ವತಿ - ರೂಪಕತಾಳ

### ಪಲ್ಲವಿ

1. ಪ ದ ಸಾ ನಿ ದ ॥ ಪಾ ॰ ॰ ನಿ ದ ಪ ಮ ॥

ಅ ನು ರಾ ಗ ಮು ॥ ಲೇ. . ನಿ . . . ॥

2. ಪ ದ ಸ ದ ರಿ ಸ ನಿ ದ ॥ ಪಮದಪ ದಸನಿದ ದದಪಮ॥

ಅ ನುರಾ . . ಗಮು ॥ ಲೇ . . . . . . . ನಿ . . . ॥

3. ಪ ದ ಸಾ ರಿ ಸ ನಿ ದ ॥ ಪಮಪದದ-ಸನಿದ ದದಪಮ ॥

ಅ ನು ರಾ. . ಗ ಮು ॥ ಲೇ . . . . . . . ನಿ . . . ॥

ರಿ ಸ ನಿ ದ ಸಾ ॥ ರಿಮ ಪದರಿಸ ನಿದಪಮ ॥

ಮ ನ ಸು ವ ಸು ॥ ಜ್ಞಾ . ನ . ಮು.ರಾ. ದು. ॥

ಪದ ಸಾ ನಿ ದ ॥ ಪಾ॰ಮ ದಪಮರಿ ॥ ॰ ॰ ಸರಿ॰॰ಸಾ ॥

ಅನು ರಾ ಗ ಮು ॥ ಲೇ . ನಿ . . . ॥ . . . . . ॥

### ಅನುಪಲ್ಲವಿ

1. ಪ ದ ಸಾ ರಿ ರಿ ॥ ಸಾ ,, ನಿ ದ ಪ ಮ ॥

ಘ ನು ಲೈ . ನ ॥ ಅಂ ತ . ರ . ॥

2. ಪ ದ ಸಾ ರಿ ರಿ ॥ ಸಾ ಪ ದ ಸಾ ನಿದಪಮ ॥

ಘ ನು ಲೈ . ನ ॥ ಅಂ . . . ತ . ರ. ॥

3. ಪ ದ ಸಾ ರಿ ರಿ ॥ ರಿ ಸ ರಿ ಮ ಪ ಮ ರಿರಿ ॥

ಘ ನು ಲೈ . ನ ॥ ಅಂ . . . . ತ ರ ॥

ಸಾ ನಿ ದ ಪ ದ ॥ ಪದಸಾ ನಿದ ರಿಸನಿದಪಮ ॥

ಜ್ಞಾ ನು ಲ ಕೆ ರು ॥ ಕೇ. . . . ಗಾ. . . ನಿ .॥ ॥ ಅನು ॥ 3ನೇ ಸಂಗತಿ.

ಚರಣ

1. , ಪದಾನಿದಾ ಪಾ ॥ ಪದಪಮ ರಿ ೀ ೀ ಸ ॥

, ವಗ ವಗ ಗಾ ॥ ಭು . ಜಿ . ಯಿಂ ಚು ॥

ಸಾ ನಿ ದ ಸಾ ॥ ರಿ ಮಾ ಪದನಿದಪಮ ॥

ವಾ ರಿ ಕಿ ತ್ರ ॥ ಪ್ರಿ ಯೌ ರೀ. ..ತಿ . ॥

2. ,ಪ ದಾನಿದಾ ರಿಸನಿದ ॥ ಪದಪಮ ರೀೀಸ ॥

,ವ ಗ ವ ಗ ಗಾ ...॥ ಭು .ಜಿ. ಯಿಂಚು ॥

ಸಾರಿಸ ನಿದ ಸಾ ॥ ರಿಮಾ ಪದನಿದಪಮ ॥

ವಾ. . ರಿಕಿ ತ್ರ ॥ ಪ್ರಿಯೌ ರೀ ... ತಿ. ॥

ಪ ದ ಸಾರೀ ॥ ಸರಿ ಸಾನಿದಪಮ ॥

ಸ ಗುಣ ಧ್ಯಾ ॥ ನಮು ಪೈನಿ . . . ॥

ಪದಸಾರೀ ॥ ಸರಿ ರಿಮಪಮ ರಿರಿ ॥

ಸಗುಣಧ್ಯಾ ॥ ನಮುಪೈ . . . .ನಿ ॥

ಸಾ ನಿದ ಪದ ॥ ಪದಸಾನಿದ ರಿಸ ನಿದಪಮ ॥

ಸೌಖ್ಯಮುತ್ಯಾಗ ॥ ರಾ. . ಜ . ವಿ .ನು . ತ.॥ ॥ಅನುರಾಗಮು ॥ 2ನೇಸಂಗತಿ.

## ರಾಗ - ಮಧ್ಯಮಾವತಿ - ರೂಪಕ ತಾಳ
## ಮುತ್ತುಸ್ವಾಮಿ ದೀಕ್ಷಿತರ ಕೃತಿ

**ಆರೋಹಣ** - ಸ ರಿ ಮ ಪ ನಿ ಸ ॥ **ಅವರೋಹಣ** - ಸ ನಿ ಪ ಮ ರಿ ಸ ॥
ಚ ಶು ಕೈ

### ಪಲ್ಲವಿ

ಧರ್ಮ ಸಂವರ್ಧನಿ ದನುಜ ಸಮ್ಮರ್ದಿನಿ ।
ಧರಾಧರಾತ್ಮಜೇ ಅಜೇದಯಯಾ ಮಾಂಪಾಹಿಪಾಹಿ ॥ಧರ್ಮ॥

### ಅನುಪಲ್ಲವಿ

ನಿರ್ಮಲ ಹೃದಯ ನಿವಾಸಿನಿ
ನಿತ್ಯಾನಂದ ವಿಲಾಸಿನಿ ॥
ಕರ್ಮಜ್ಞಾನ ವಿದಾಯಿನಿ
ಕಾಂಕ್ಷಿತಾರ್ಥ ಪ್ರದಾಯಿನಿ ॥ಧರ್ಮ॥

### ಚರಣ

ಮಾಧವ ಸೋದರಿ ಸುಂದರಿ
ಮಧ್ಯಮಾವತಿ ಶಂಕರಿ ॥
ಮಾಧುರ್ಯವಾಗ್ವಿಜೃಂಭಿಣಿ
ಮಹಾದೇವ ಕುಟುಂಬಿಣಿ ॥
ಸಾಧು ಜನ ಚಿತ್ತರಂಜನಿ ಶಾಶ್ವತ
ಗುರುಗುಹ ಜನನಿ ॥
ಬೋಧರೂಪಿಣಿ ನಿರಂಜನಿ ॥
ಭುವನೇಶ ದುರಿತ ಭಂಜನಿ ॥ ॥ಮಧ್ಯಮ ಕಾಲ ಸಾಹಿತ್ಯ)
ಪಾದಜ ವಿಶ್ವವಿಲಾಸಿನಿ ಪಂಚನದೀಶೋಲ್ಲಾಸಿನಿ ॥
ವೇದಶಾಸ್ತ್ರ ವಿಶ್ವಾಸಿನಿ ವಿಧಿ ಹರಿಹರ ಪ್ರಕಾಶಿನಿ ॥ ॥ ಧರ್ಮ॥

## ಭಾವಾರ್ಥ

ಧರ್ಮ ಸಂವರ್ಧನಿ -

ಮಹಾದೇವನ ಮಡದಿಯಾಗಿ ಶ್ರೀ ಮಹಾವಿಷ್ಣುವಿನ ಸೋದರಿಯಾಗಿ ಜನ್ಮರಹಿತಳಾದರೂ ನೆಪಮಾತ್ರವಾಗಿ ಹಿಮವಂತನ ಮಗಳೆನಿಸಿ, ಧರ್ಮೋದ್ಧಾರ ಮಾಡುತ್ತಾ ರಾಕ್ಷಸರನ್ನು ಸಂಹರಿಸುತ್ತಾ ಧರ್ಮ ಸಂವರ್ಧನಿ ಎಂಬ ಅಂಕಿತದಿಂದ ಪಂಚನದ ಕ್ಷೇತ್ರವೆಂದು ಖ್ಯಾತಿ ಗಳಿಸಿರುವ ತಿರುವಯ್ಯಾರಿನಲ್ಲಿ ಕಂಗೊಳಿಸುವ ಪಾರ್ವತೀ ದೇವಿಯೇ ಕರುಣೆ ತೋರಿ ರಕ್ಷಿಸು.

ನೀನು ಪರಿಶುದ್ಧಾತ್ಮರ ಹೃದಯದಲ್ಲಿ ನೆಲಸಿ ನಿತ್ಯಾನಂದದಲ್ಲಿ ನಲಿಯುತ್ತಿರುವೆ. ಕರ್ಮಯೋಗ ಜ್ಞಾನಯೋಗಗಳನ್ನು ತಿಳಿದು ಜನ ಸಮುದಾಯದಲ್ಲಿ ಬಿತ್ತರಿಸುತ್ತಿರುವೆ ಮತ್ತು ಬೇಡಿದ ವರಗಳನ್ನು ಅನುಗ್ರಹಿಸುವವಳಾಗಿರುವೆ. ಮಂಗಳದಾಯಿನಿಯಾದ ನಿನ್ನ ಮಾತು ಅಮೃತದಂತೆ ಮಧುರ. ಸಜ್ಜನರ ಮನಸ್ಸನ್ನು ರಂಜಿಸುತ್ತಾ ಜ್ಞಾನ ಸ್ವರೂಪಿಣಿಯಾಗಿ, ನಿರ್ಲಿಪ್ತಳಾಗಿ, ಗುರುಗುಹಮಾತೆಯಾಗಿ ಲೋಕ ಕಂಟಕರಾದ ರಾಜರ ಪಾಪಗಳನ್ನೂ ನಿವಾರಿಸುವವಳಾಗಿ ಬೆಳಗುತ್ತಿರುವೆ. ಇಡೀ ವಿಶ್ವವೇ ನಿನ್ನ ವಿಲಾಸ ಭೂಮಿ. ಸಕಲ ವೇದ ಶಾಸ್ತ್ರಗಳೂ ನಿನಗೆ ಅಭಿಮತ. ಹರಿ ಹರ ಬ್ರಹ್ಮರು ನಿನ್ನ ಬೆಳಕಿನ ವಲಯದಲ್ಲಿರುವವರು. ಈ ಬಗೆಯ ಮಹಿಮೋನ್ನತಳಾದ ಧರ್ಮ ಸಂವರ್ಧನಿಯೇ, ದಯೆ ತೋರಿ ನನ್ನನ್ನು ಸಲಹು.

### ರಾಗ - ಮಧ್ಯಮಾವತಿ - ರೂಪಕ

ಆ ॥ ಸ ರಿ ಮ ಪ ನಿ ಸ ॥ ಅವ ॥ ಸ ನಿ ಪ ಮ ರಿ ಸ ॥
ಚ ಶು ಕೈ

## ಪಲ್ಲವಿ

1. ರೀ ರಿ ರಿರಿಸ ॥ ರೀ ಪಮ ರೀಸ ॥ ರಿಸರಿ ಸಾ,॥ ರಿಸನೀಸರೀ ॥

ಧ.ರ್ಮ ಸಂ. ॥ ವ ರ್ಧ.ನಿ . . ॥ ದನುಜ ಸಂ ॥ ಮ . ರ್ದಿನಿ ॥

2. ರೀ ರಿ ರಿರಿಸ ॥ ರಿಮಪಾಮ ರಿಮಪಮರಿಸ ॥ ರಿಸರಿ ಸರಿಮರಿರಿಸ ॥ ರಿಸನೀ ಸರೀ ॥

ಧ.ರ್ಮ ಸಂ. ॥ ವ . . ರ್ಧ ನಿ . . . ॥ ದನುಜ ಸಂ. . . .॥ ಮ ..ರ್ದಿನಿ ॥

3. ರೀ ರಿ ರಿರಿಸ ॥ ರಿಮಪನಿಸನಿಪಮರಿಮರಿಸ ॥ ರಿಸರಿ ಸರಿಮರಿರಿಸ ॥ ರಿರಿಸನಿ ರಿಸರೀ ೀ ॥

ಧ.ರ್ಮ ಸಂ. ॥ ವ . . ರ್ಧ ನಿ . . . . ॥ ದನುಜ ಸಂ . . ॥ ಮ . .ರ್ದಿ.ನಿ .. ॥

1. ಸಾಸನಿಪಾ ನಿಸಾ ॥ ರಿಮರಿಮಪಾ ॥ ಪನಿಸಾ ಪನಿಸನಿ ಪಾ,ಮ ॥ ರಿಮಪನಿಪಮ ರಿಮಪಮರಿಸ ॥

ಧರಾ . . ಧರಾ ॥ ತ್ಮಜೇ. ಅಜೇ ॥ ದ . ಯ ಯಾ. ಮಾಂ. ॥ ಪಾ . . ಹಿ . ಪಾ . ಹಿ. ॥

2. ಸಾಸನಿಪಾ ನಿಸಾ ॥ ರಿಮರಿಮಪಾ ॥ ಪನಿಸಾ ಪನಿಸನಿ ಪಾ,ಮ ॥ ರಿಮಪನಿಸನಿ ಪಮರಿಮರಿಸ ॥

ಧ ರಾ ಧ ರಾ ॥ ತ್ಮಜೇ ಅಜೇ ॥ ದ ಯ ಯಾ ಮಾಂ ॥ ಪಾ . ಹಿ . ಪಾ . ಹಿ. ॥

॥ಧರ್ಮಸಂ.. 1ನೇ ಸಂಗತಿ॥

ಅನುಪಲ್ಲವಿ

, ಮಮಮ ರಿಮ ॥ ಪಮಪಾ ಸನಿಪಮಪಾ ॥ , ಮಪಾಪನಿ । ಪಪನಿಸಾ ೞನಿಸ ॥

ನಿರ್ಮಲ ಹೃದ ॥ ಯನಿವಾ . ಸಿ . ನಿ ॥ . ನಿತ್ಯಾನಂ । ದ ವಿ .ಲಾ.ಸಿನಿ ॥

2. , ಮಮಮರಿಮಪಮ ॥ ರಿಸ ರಿಮಪಾಸನಿಪಮಪಾ ॥ , ಮಪಾಪನಿ । ಪಪನಿಸಾ ೞನಿಸ ॥

- ನಿರ್ಮಲ ಹೃ . ದ. ॥ ಯ . ನಿ . ವಾ. ಸಿ. ನಿ. ॥ . ನಿತ್ಯಾನಂ । ದ ವಿ.ಲಾ.ಸಿನಿ ॥

-ನಿನೀ ಸಾರಿಮ ॥ ರೀ ಸಾಸನಿಪಾ ನಿಸ ॥ ಸನಿಸರಿಸಾ ಸನಿಪಾ ನೀ ॥, ಪಮರೀಪಮ ರಿಸ॥

ಕರ್ಮ ಜ್ಞಾ . . ॥ ನ ವಿಧಾ . . ಯಿನಿ ॥ ಕಾಂ . . ಕ್ಷಿ ತಾ . ರ್ಥ ॥, ಪ್ರ . ದಾ . ಯಿನಿ॥

॥ಧರ್ಮಸಂ.. 3ನೇ ಸಂಗತಿ॥

ಚರಣ

, ರಿ ರಿ ಮ ಪಾ । ಮರಿ ರಿಮರಿಸ । , ಸಾರಿಮ ರಿಸಾ, , ॥ ಸನಿಪಾ ನಿಸರಿಸ ರಿರಿ॥

ಮಾಧವ ಸೋ । ದರಿ ಸುಂದರಿ । ಮಧ್ಯ . ಮಾ. - ॥ ವ . ತಿ ಶಂ .. ಕರಿ॥

, ರಿರಿಮ ಪಾಸನಿ ॥ ಪಮರೀಸರಿಪಮರಿಸ ॥ , ಸಾರಿಮ ರಿಸಾ, , ॥ ಸನಿಪಾ ನಿಸರಿಸ ರಿರಿ॥

ಮಾಧವ ಸೋ. । ದ . ರಿ ಸುಂ . ದರಿ । , ಮ ಧ್ಯ . ಮಾ. - ॥ ವ . ತಿ ಶಂ . .ಕರಿ॥

, ಮಮಾಮ ಸರಿ ॥ ಮಾ ರಿಮಪಾ ಪಪ ॥ ಪನಿನಿಸಾನಿ ಪಾಮ ॥ ರಿರೀ ಪಮರೀ ಸ ॥

ಮಾಧುರ್ಯ ವಾ.॥ . . ಗ್ವಿ.ಜೃಂ . ಭಿಣಿ ॥ ಮ.ಹಾ . ದೇವ ॥ ಕು ಟುಂ ಬಿ.ಣಿ - ॥

, ಮಮಾಮ ಸರಿ ॥ ಮಾ ರಿಮಪಾ ಪಪ ॥ ಪನಿಸಾರಿಸನಿರಿಸನಿಪಾಮ ॥ ರಿರೀ ಪಮರೀಸ ॥

ಮಾಧುರ್ಯ ವಾ ॥ . ಗ್ವಿ . ಜೃಂ. .ಭಿಣಿ ॥ ಮ.ಹಾ . . ದೇ . ವ ॥ ಕುಟುಂ ಬಿ .ಣಿ - ॥

, ಮಮಮಮ ಸರಿ ॥ ಮಾ ರಿಮಪಾ ಪಪಾ ॥ , ಪಪಪ ನಿನಿ ॥ ಮಪ ಪಾಸನಿ ಸಾ॥

ಸಾಧು ಜ ನ ಚಿ. ॥ ತ್ತ ರಂ . ಜ ನಿ ॥ ಶಾಶ್ವತಗುರು ॥ ಗುಹ ಜ ನ ನಿ. ॥

,ನಿನಿ ಸಾರಿಮರಿ । ಸ ಸರಿಸನಿಪಾ ಪನಿಸಾ ॥ ರಿಸಸನಿಪಾನೀಸನಿ ॥ ಪಮ ರೀಪಮರಿಸ ॥

ಬೋಧರೂ.ಪಿ । ಣಿ ನಿ. ರಂ . ಜ . ನಿ ॥ ಭುವನೇ. ಶದು. ॥ ರಿ ತ ಭಂ . ಜನಿ ॥

ರೀಮರಿಮಾಪಮಪಾಪಪ ॥ ಮಾಪಪನೀ ಪನಿ ಸಾಸಸ ॥ ನಿಸರಿ ರಿಮರಿ ಸಾನಿಪನಿಸ ॥

ಪಾದಜ ವಿಶ್ವ ವಿಲಾ ಸಿನಿ ॥ ಪಂಚನದೀ ಶೋ.ಲ್ಲಸಿನಿ ॥ ವೇ.ದ ಶಾ.ಸ್ತ್ರ ವಿಶ್ವಾ.ಸಿನಿ ॥

ರಿಸನಿಪ ನಿಪಾಮ ರಿಮರಿಸ ॥

ವಿಧಿಹರಿ ಹರ ಪ್ರ ಕಾ. ಶಿನಿ ॥

॥ಧರ್ಮಸಂ.. 3ನೇ ಸಂಗತಿ॥

## ರಾಗ - ಷಣ್ಮುಖಪ್ರಿಯ - ಆದಿ ತಾಳ (56ನೇ ಮೇಳಕರ್ತ)
## ಪಟ್ಟಣಂ ಸುಬ್ರಹ್ಮಣ್ಯ ಅಯ್ಯರ್ ಅವರ ಕೃತಿ

**ಆರೋಹಣ** - ಸ ರಿ ಗ ಮ ಪ ದ ನಿ ಸ ॥ **ಅವರೋಹಣ** - ಸ ನಿ ದ ಪ ಮ ಗ ರಿ ಸ ॥
ಚ ಸಾ ಪ್ರ ಶು ಕೈ

**ಪಲ್ಲವಿ**

ಮರಿವೇರೆ ದಿಕ್ಕೆವರಯ್ಯ ರಾಮ

ಮಾಟಿಮಾಟಿಕಿನಿ ದೆಲುಪವಲೆನಾ ॥ಮರಿ॥

**ಅನುಪಲ್ಲವಿ**

ದರಿದಾಪುಲೇನಿ ನಾಜಾಲಿ ದೀರ್ಚಿ

ದಯಜೇಸಿ ಬ್ರೋಚೇದೊರನಿವುಗಾದಾ ॥ಮರಿ॥

**ಚರಣ**

ನಿನ್ನು ಚಾಲನಮ್ಮಿ ಯುನ್ನವಾಡನುಚು ।
ನೀಚಿತ್ತಮುನಕೇ ತೆಲಿಸಿಯುಂಡಗ ।
ಸನ್ನುತಾಂಗ ಶ್ರೀ ವೆಂಕಟೇಶ ನೀವು
ನನ್ನು ಬ್ರೋವಕಯುಂಡುಟನ್ಯಾಯಮಾ ॥ಮರಿ॥

**ಭಾವಾರ್ಥ**

ಹೇ ಶ್ರೀರಾಮ, ನಿನ್ನನ್ನುಳಿದು ಮತ್ತಾರು ಪೊರೆಯುವರಿರುವರು ? ಇದನ್ನು ಮತ್ತೆ ಮತ್ತೆ ನಿನ್ನಲ್ಲಿ ಅರಿಕೆ ಮಾಡಬೇಕೆ? ದಾರಿ ಕಾಣದೆ ತೊಳಲುತ್ತಿರುವ ನನ್ನ ಸಂಕಟವನ್ನು ಕಂಡು ರಕ್ಷಿಸಬೇಕಾದ ದೊರೆ ನೀನಲ್ಲವೇ ? ನಾನು ನಿನ್ನನ್ನೇ ನಂಬಿಕೊಂಡಿರುವವನೆಂಬುದು ನಿನಗೆ ತಿಳಿದಿರುವ ವಿಷಯ. ಆದರೂ ನನ್ನನ್ನು ರಕ್ಷಿಸದಿರುವುದು ಸರಿಯೆ ?

## ರಾಗ - ಷಣ್ಮುಖಪ್ರಿಯ - ಆದಿ

ಪಲ್ಲವಿ

; , ಪದಪಾಮ । ಪಾಽಪ । ಮನೀಽಪದ ॥

ಮರಿವೇರೆ । ದಿ. .ಕ್ಕೆ । ವರಯ್ಯ . ॥

2. ನೀಽ ಽ ದಾ ಽ = ಪದಪಾಮ । ಪಾಽಪ । ಮನೀದ ॥

ರಾ. .ಮ.. = ಮರಿವೇರೆ । ದಿ. .ಕ್ಕೆ । ವರಯ್ಯ ॥

3. ಪದನಿದಪಮ= ಪದಪಾಮ । ಪಾಽಪ । ಮನೀ ದ ॥

ರಾ. . ಮ.. = ಮರಿವೇರೆ । ದಿ. .ಕ್ಕೆ । ವ ರ.ಯ್ಯ॥

4. ಸನೀನಿದಾ = ಪದಪಾಮ । ಪದನೀದಾ ಪದ । ನೀ ಸಾ ನಿ ॥

ರಾ. .ಮ.. = ಮರಿವೇರೆ । ದಿ . . ಕ್ಕೆ . । ವ ರ ಯ್ಯ ॥

5. ರಿಸನಿದಪಮ = ಪದಪಾಮ । ಪದನಿದನೀ ಪದ । ನಿಸರಿಗರೀ ಸನಿ ॥

ರಾ. . ಮ.. = ಮರಿವೇರೆ । ದಿ . . . ಕ್ಕೆ .। ವ.ರ . .ಯ್ಯ. ॥

1. ರಿಸನಿದಪಮ = ಪಪ ಪಮರೀಗ । ರೀಽ ಸಾಽ ಸರಿ । ಗಾ ರಿಗಮಾ ಪಮ ॥

ರಾ. . ಮ.. = ಮಾಟಿಮಾ..ಟಿ । ಕಿ.. ನಿ.. ದೆ . । ಲು ಪ . . ವ . ॥

6. ಪದನಿದಪಮ = ಪದಪಾಮ । ಪದನಿದನೀ ಪದ । ನಿಸರೀಗರಿಸಾರಿಸನಿಸ ॥

ಲೆ . .ನಾ. . = ಮರಿವೇರೆ । ದಿ . . . ಕ್ಕೆ .। ವ . ರ . . . ಯ್ಯ ॥

2. ರೀಗರಿ ಸಾರಿಸನಿದ = ಪಪಪಮರೀಗ । ರೀಽಸಾಽಸರಿ । ಗಾ ರಿಗಮಪದನಿ ॥

ರಾ . . . ಮ. = ಮಾಟಿಮಾ.ಟಿ । ಕಿ . ನಿ ದೆ .। ಲು ಪ . . ವ . ॥

ಸಾರಿಸನಿದಪಮ = ಪದಪಾಮ । ಪಾಽಪಮ । ಗರಿ ಗಮಪದದಪ ॥

ಲೆ . ..ನಾ . . = ಮರಿವೇರೆ । ದಿ . ಕ್ಕೆ . । ವ . ರ . . . ಯ್ಯ॥

ಪಾಽ =

. . =

ಅನುಪಲ್ಲವಿ

; , ಪಾಪದನೀಸ । ರೀ ॰ ರೀ ॰ ಸ । ॰ ನೀ ದ ॥

ದರಿ. ದಾಪು । ಲೇ . ನಿ . ನಾ । ಜಾಲಿ ॥

2. ಪದನಿದಪಮ = ಪಾಪದನೀಸ । ರಿಸನಿಸರೀ ಸರಿ । ಗಾ ಗರಿರೀಸ ॥

ದೀ..ರ್ಚ. . = ದರಿ .ದಾಪು । ಲೇ . ನಿ ನಾ. । . ಜಾ . ಲಿ ॥

3. ರಿಸನಿದಪಮ = ಪದಪದರಿಸನೀಸ । ರಿಸನಿಸರೀ ಸರಿ । ಗಾ ರಿಗಪಮಗಾ ॥

ದೀ..ರ್ಚ. . = ದ . ರಿ. ದಾ.ಪು । ಲೇ . ನಿ ನಾ. । . ಜಾ. . .ಲಿ ॥

ರೀ॰ ರೀ॰ = ರೀಮಗ ಗರಿರೀರಿನಿ । ಸಾ॰ ಗರಿಸಸನಿ । ದಾ ಪಾ ಮ ॥

ದೀ . ರ್ಚ = ದ. ಯ.ಜೇ . .ಸಿ. । ಬ್ರೋಚೇ.ದೊ । ರ ನೀ ವು ॥

ಪಾ, ಪಾ, = ರೀಮಗಗರಿರೀರಿನಿ । ಸಾ॰ ಗರಿಸಸನಿ । ದಾ ಪಾ ಮ ॥

ಗಾ . ದಾ = ದ .ಯ.ಜೇ..ಸಿ. । ಬ್ರೋಚೇ.ದೊ.। ರ ನೀ ವು ॥

ಪದನಿಸನಿದ =

ಗಾ . ದಾ . = ಮರಿವೇರೆ 6ನೇ ಸಂಗತಿ ಮತ್ತು ನಿಲುಗಡೆ ಸಂಗತಿಯನ್ನು ಹಾಡುವುದು.

ಚರಣ

; , ಸಸಪಾಮ । ಪದಾದಪಮ ಪದ । ಪದ ಪಮಗಾ ಗಾ ॥

ನಿನ್ನುಬಾಲ । ನ . ಮ್ಮಿ . . ಯು । ನ್ನ . ವಾ . . ಡ ॥

ರೀ ॰ ಸಾ॰ = ಸರಿಗಾಗರಿರೀರೀ । ಸನೀಸಾ॰ ಸರಿ । ಗಾ ಮಪಮ ॥

ನು.. ಚು.. = ನೀ. .ಚಿ... ತ್ತ । ಮುನ ಕೇತೆಲಿ । ಸಿ ಯುಂ.ಡ ॥

ಪಾ ॰ = ಸನ್ನು ತಾಂಗ । ಶ್ರೀ ವೆಂ । ಕ ಟೇ ಶ ॥ ನೀವು

ಗ = ನನ್ನು ಬ್ರೋವ । ಕ ಯುಂಡು । ಟನ್ಯಾಯ ॥ ಮಾ = **ಮರಿವೇರೆ**

ಅನುಪಲ್ಲವಿಯಂತೆ ಹಾಡಿ ಪಲ್ಲವಿಯ 6ನೇ ಸಂಗತಿ ಮತ್ತು ನಿಲುಗಡೆ ಸಂಗತಿಗಳನ್ನು ಹಾಡಿ ಮುಗಿಸುವುದು.

## ರಾಗ - ಕೀರವಾಣಿ - ರೂಪಕ ತಾಳ (21ನೇ ಮೇಳಕರ್ತ)
## ಪಟ್ಟಣಂ ಸುಬ್ರಹ್ಮಣ್ಯ ಅಯ್ಯರ್ ಅವರ ಕೃತಿ

### ಪಲ್ಲವಿ

ವರಮುಲೊಸಗಿ ಬ್ರೋಚುಟನೀ
ಕರುದಾಜಗದಾಧಾರ ॥

### ಅನುಪಲ್ಲವಿ

ಪರಮದಯಾಕರ ಸುಗುಣಾ-
ಭರಣನೇ ಕೋರಿನ ॥ವರಮು॥

### ಚರಣ

ಉದರ ಪೋಷಣಾರ್ಥಮ್ಮೈ
ಒರುಲ ಮನಸು ಕರಗ ಬಲ್ಕಿ
ನದಿ ಯೊಕ ಭಾರತ ಮೌನೇ
ತುದನು ಸುಖಮುಗಾನಕಯೇ
ಮದಿನಿ ಚಿಂತನೊಂದು ಚುವೇ
ಮರುನೀತೋ ಬಲ್ಕಿತಿ ನಾ
ಮದನಜನಕ ವೆಂಕಟೇಶ
ಮನಸು ನೀಕು ಕಲಿಗಿಯುಂಟೇ ॥ವರಮು॥

### ಭಾವಾರ್ಥ

ಲೋಕದ ಸುಸ್ಥಿತಿಗೆ ಆಧಾರ ಭೂತನಾಗಿರುವವನೂ, ದಯಾಮಯನೂ ಸದ್ಗುಣಗಳಿಂದ ಅಲಂಕೃತನಾದವನೂ ಆದ ನಿನಗೆ ನಾನು ಕೋರಿದ ವರಗಳನ್ನು ನೀಡಿ ನನ್ನನ್ನು ಪಾಲಿಸುವುದು ಅಸಾಧ್ಯವೇ ? ಹೊಟ್ಟೆಪಾಡಿಗಾಗಿ ಇತರರ ಮನಸ್ಸು ಕರಗುವಂತೆ ಮಾತನಾಡಿದ್ದು ಒಂದು ದೋಷವೇ? ಸುಖವನ್ನು ಕಾಣದೆ ಅಂತರಂಗದಲ್ಲಿ ಪರಿತಪಿಸಿದೆನೇ ಹೊರತು ನನ್ನ ಸಂಕಟವನ್ನು ನಿನ್ನಲ್ಲಿ ಹೇಳಿಕೊಂಡೆನೇ. ಮನ್ಮಥನನ್ನು ಹೆತ್ತ ಮಹಾ ವಿಷ್ಣುವೇ, ಇವೆಲ್ಲವನ್ನೂ ಅರಿತು ನೀನೇ ನನ್ನ ರಕ್ಷಣೆಗೆ ಬರುವುದು ನಿನಗೆ ಸಾಧ್ಯವಿಲ್ಲವೇ?

### ರಾಗ - ಕೀರವಾಣಿ - ರೂಪಕ ತಾಳ

### ಪಲ್ಲವಿ

ಪ ಮ ಗ ರಿ ಸ ರಿ ॥ ರಿಸನ್ನೀ ಸಗ ರೀ ॥

ವ ರ ಮುಲೊಸ ಗಿ॥ ಬ್ರೋ. ಚುಟನೀ ॥

ರಿಗಮಾ ಪದ ॥ ಪಾ ಪಮಗರಿಗಮ ॥

ಕರುದಾ ಜಗ ॥ ದಾ. ಧಾ . . ರ . ॥

ಪ ಮ ಗ ರಿ ಸ ರಿ॥ ರಿಸನ್ನೀ ಸಗ ರೀ ॥

ವ ರ ಮುಲೊಸ ಗಿ॥ ಬ್ರೋ. . ಚುಟನೀ ॥

ಸರಿಗಾರಿಗಮಾ ಗರಿಗಮ ॥ ಪದಮಪಾ ಪಮಗರಿಗಮ ॥

ಕ . ರು ದಾ. ಜ . ಗ. ॥ ದಾ . . ಧಾ . . ರ . ॥

ಪಮ ಗ ರಿ ಸ ರಿ॥ ರಿಸನ್ನೀ ಸಗರೀ ॥

ವ ರ ಮು ಲೊಸ ಗಿ॥ ಬ್ರೋ. ಚುಟನೀ ॥

ಸರಿಗಾ ರಿಗಮಾ ಗಮಪದ ॥ ನೀ ದನಿನಿದಪಮ ॥

ಕ .ರು ದಾ. . ಜ . ಗ . ॥ ದಾ. ಧಾ . . ರ. ॥

ಪ ಮ ಗ ರಿ ಸ ರಿ॥ ರಿಸನ್ನೀ ಸರಿಗಾ ರೀ ॥

ವ ರ ಮು ಲೊಸ ಗಿ॥ ಬ್ರೋ . ಚು.ಟ ನೀ ॥

ಸರಿಗಮ ಪದನೀ ದಪದನಿ ॥ ದನಿಸಾ ನಿಸನಿದಪಮ ॥

ಕ .ರು . ದಾ . ಜ . ಗ. ॥ ದಾ. . ಧಾ . . ರ. ॥

ಪ ಮ ಗ ರಿ ಸ ರಿ ॥ ರಿಸನ್ನೀ ಸರಿಗಾರೀ॥

ವ ರ ಮುಲೊಸ ಗಿ॥ ಬ್ರೋ. ಚುಟನೀ ॥

ಸರಿಗಮ ಪದನೀದಪದನಿ ॥ ಸರಿಗರಿಸಾ ನಿಸನಿದಪಮ ॥

ಕ . ರು .ದಾ . ಜ . ಗ. ॥ ದಾ . ಧಾ . . ರ. ॥

ಪಲ್ಲವಿಯ ಮೊದಲ ಸಂಗತಿಯನ್ನು ಹಾಡಿ ನಿಲ್ಲಿಸುವುದು.

**ಅನುಪಲ್ಲವಿ**

ದಪ ದನಿ ಸಾ ॥ ನಿಸಾ ನಿಸನಿದಪಮ ॥

ಪರಮದಯಾ ॥ ಕ ರ . . . . ॥

ದಪ ದನಿ ಸಾ ॥ ನಿದ ಸನಿ ಸಾ॥

ಪರಮದಯಾ ॥ ಕರಸುಗುಣಾ ॥

ದಪದ ನಿ ಸಾ ॥ ನಿಸ ರಿ ಗ ರೀ॥

ಪರಮದಯಾ ॥ ಕರ ಸು ಗುಣಾ॥

ಸರಿಗರಿಸಾ ನೀ ॥ ದನಿನಿದಪಾ ಪಮಗರಿಗಮ॥

ಭ. ರ. ಣ ನೇ.. ॥ ಕೋ . ರಿ ನ . . . ॥

ದಪದ ನಿ ಸಾ ॥ ನಿಸ ರಿ ಗ ರೀ ॥

ಪರಮದಯಾ ॥ ಕರ ಸು ಗುಣಾ॥

ಸರಿಗರಿ ನಿಸರಿಸ ಸರಿಗರಿ ॥ ರಿಸನಿದಪಾ ಪಮಗರಿಗಮ ॥

ಭ. ರ. ಣ . . ನೇ. . ॥ ಕೋ . ರಿ ನ . . . ॥

ಪ ಮ ಗ ರಿ ಸ ರಿ ॥ ರಿಸನೀ ಸರಿಗಾ ರಿಗಮಾ॥

ವ ರ ಮುಲೊಸ ಗಿ॥ ಬ್ರೋ. ಚು.ಟ ನೀ . .॥

ಗರಿಗಮ ಪದನೀ ದಪದನಿ ॥ ಸರಿಗರಿಸಾ ನಿಸನಿದಪಮ ॥

ಕ.ರು . ದಾ . ಜ. ಗ. ॥ ದಾ . . ಧಾ . . ರ . ॥

ಪಲ್ಲವಿಯ ಮೊದಲನೆ ಸಂಗತಿಯನ್ನು ಹಾಡಿ ನಿಲ್ಲಿಸಬೇಕು.

ಚರಣ

ಪ ದ ಪ ಮ ಪ ಮ ॥ ಗ ರಿ ಗ ಮ ಪಾ ॥

ಉ ದ ರ ಪೋ. ಷ ॥ ಣಾ. . ರ್ಥ ಮೈ ॥

ರಿ ಗ ಮ ಪ ಮ ಗ ॥ ರಿಗಮಾಗ ಗರಿರೀಸ ॥

ಒ ರು ಲ ಮ ನ ಸು॥ ಕ . ರ ಗ ಬ. .ಲ್ಕಿ ॥

ಸ ನಿ ದಾ ಸ ನಿ ಸಾ॥ ನಿ ಸ ರಿ ಗ ರೀ ॥

ನ . ದಿ ಯೊಕ ಭಾ॥ ರತ ಮೌ. ನೇ ॥

ರಿ ಗ ಮ ಪ ಮ ಗ ॥ ರಿಗಮಾಗ ಗರಿರೀಸಾ॥

ತುದ ನು ಸು ಖಮು ॥ ಗಾ. . . ನ.ಕಯೇ॥

ಪದಪ ಮಾದಪಪಮ ॥ ಗ ರಿ ಗ ಮಪಾ॥

ಮದಿನಿ ಚಿಂ . ತ . ॥ ನೊಂದುಚುವೇ॥

ಪದನೀ ದನಿದಾ ಪಮ ॥ ದಪದ ನಿಸಾ ॥

ಮ.ರು ನೀ. . ತೋ.॥ ಬ .ಲ್ಕಿ ತಿನಾ ॥

ಸ ನಿ ಸ ರಿ ರಿ ರಿ ॥ ರಿ ಗ ಮಾಗಗರಿರೀ ಸ ॥

ಮದ ನ ಜ ನ ಕ ॥ ವೆಂ. ಕ ಟೇ . .ಶ ॥

ಸರಿಗರಿಸಾ ಸನಿದಾನೀ ॥ ದನಿಸಾನೀ ದನಿನಿದಪಮ ॥

ಮ.ನ.ಸು ನೀ . ಕು ॥ ಗ . .ಲ್ಗಿ. ಯುಂ. ಟೇ ॥

ವರಮುಲೊಸಗಿ ಕಡೆ ಸಂಗತಿಯನ್ನು ಹಾಡಿ
ಪಲ್ಲವಿಯ ಮೊದಲ ಸಂಗತಿಯಲ್ಲಿ ಮುಗಿಸಬೇಕು.

### ರಾಗ - ಕಲ್ಯಾಣಿ - ಆದಿ ತಾಳ
### ಮುತ್ತುಸ್ವಾಮಿ ದೀಕ್ಷಿತರ ಕೃತಿ

ಆ ॥ ಸ ರಿ ಗ ಮ ಪ ದ ನಿ ಸ ॥ ಅವ ॥ ಸ ನಿ ದ ಪ ಮ ಗ ರಿ ಸ ॥

ಚ. ಅಂ. ಪ್ರ. ಚ. ಕಾ.

**ಪಲ್ಲವಿ**

ಶಿವಕಾಮೇಶ್ವರೀಂ ಚಿಂತಯೇ ಹಂ ॥
ಶೃಂಗಾರ ರಸ ಸಂಪೂರ್ಣಕರೀಂ ॥ ॥ಶಿವ॥

**ಅನುಪಲ್ಲವಿ**

ಶಿವಕಾಮೇಶ್ವರ ಮನಃ ಪ್ರಿಯಕರೀಂ ।
ಶಿವಾನಂದ ಗುರುಗುಹವಶಂಕರೀಂ । ॥ಶಿವ॥

**ಚರಣ**

ಶಾಂತ ಕಲ್ಯಾಣ ಗುಣ ಶಾಲಿನೀಂ
ಶಾಂತ್ಯತೀತ ಕಲಾ ಸ್ವರೂಪಿಣೀಂ ।
ಮಾಧುರ್ಯಗಾನಾಮೃತ ಮೋದಿನೀಂ
ಮದಾಲಸಾಂ ಹಂಸೋಲ್ಲಾಸಿನೀಂ

**ಮಧ್ಯಮ ಕಾಲ ಸಾಹಿತ್ಯ**

ಚಿದಂಬರಪುರೀಶ್ವರೀಂ ಚಿದಗ್ನಿಕುಂಡ
ಸಂಭೂತ ಸಕಲೇಶ್ವರೀಂ ॥ ॥ಶಿವ॥

**ಭಾವಾರ್ಥ**

ಧಾರ್ಮಿಕ ಶೃಂಗಾರಕ್ಕೆ ಪೂರ್ಣತೆಯನ್ನು ನೀಡುವ, ಪರಮೇಶ್ವರನ ಮನಸ್ಸಿಗೆ ಅತ್ಯಂತ ಪ್ರಿಯನಾದ ಮಂಗಳಪ್ರದನೂ ಆನಂದದಾಯಕನೂ ಆದ ಕುಮಾರಸ್ವಾಮಿಯನ್ನು ಪ್ರೀತಿ ವಾತ್ಸಲ್ಯಗಳಿಂದ ವಶಪಡಿಸಿಕೊಂಡಿರುವವಳೂ ಆದ ಶಿವಕಾಮೇಶ್ವರಿ (ಪಾರ್ವತಿ)ಯನ್ನು ಧ್ಯಾನಿಸುತ್ತೇನೆ. ಆಕೆಯು ಶಾಂತ ಸ್ವಭಾವದವಳು ಮತ್ತು ಸಕಲ ಗುಣ ಪರಿಪೂರ್ಣಳು. ಆಕಾರ ಧರಿಸಿದ ಕಲೆಯೇ ಆ ತಾಯಿ. ಮಧುರ ಗಾನ ಆಕೆಗೆ ಪರಮ ಪ್ರಿಯವಾದ ಕಲೆ. ಗಂಭೀರ ನಡಿಗೆಯ ಆಕೆಯು ಮುಮುಕ್ಷುಗಳಿಗೆ ಉಲ್ಲಾಸದಾಯಕಳು. ಚಿದಂಬರಪುರವು ಆಕೆಯ ನೆಲೆ. ಜ್ಞಾನಾಗ್ನಿಯಲ್ಲಿ ಪರಿಶುದ್ಧರಾದ ಸಕಲ ಭಕ್ತರಿಗೂ ಅಧಿದೇವತೆಯಾಗಿ ಶೋಭಿಸುವವಳು.

## ರಾಗ - ಕಲ್ಯಾಣಿ - ಆದಿ

### ಪಲ್ಲವಿ

1. ಸಸ ಸನಿದನಿ ದಪಪಾ, ಪಮಗಗ । ಮರಿ ಗಮಪಾಮ । ಪಾ ಮಪದನಿ ॥

ಶಿವ ಕಾ. . . ಮೇ . . ಶ್ವ.ರೀಂ । . . ಚಿಂ . .ತ । ಯೇ ಹಂ . ॥

2. ಸನಿಗರಿ ಸನಿದನಿ ದಪಪಾ, ನಿದಪಮ । ಗರಿ ಗಮಪಾ ಮ । ಪಾ ಮಪದನಿ ॥

ಶಿ.ವ. ಕಾ. . ಮೇ . ಶ್ವ .ರೀಂ । . . ಚಿಂ. . ತ । ಯೇ ಹಂ . ॥

3. ಸರಿಗರಿ ಸನಿರಿಸ ನಿದಸನಿ ದಪನಿದ । ಪಮಗಮಪದನಿಸ । ಗರಿಸನಿ ದಪದನಿ ॥

ಶಿ.ವ . ಕಾ . . ಮೇ .. ಶ್ವ.ರೀಂ । . . ಚಿಂ . ತ .। ಯೇ . .ಹಂ . ॥

ಪಮಗಾ ೯ ಸನಿದಾ ದಾೇ ಗ ರೀ । ಸಾ ಸನಿನಿದ । ಪ ಮಗಮಪದನಿ ॥

ಶ್ರಂ . ಗಾ . ರ ರ ಸ । ಸಂ ಪೂ. . । ರ್ಣಕ. ರೀಂ . .॥ ॥ಶಿವ॥ 1ನೇ ಸಂಗತಿ.

### ಅನುಪಲ್ಲವಿ

ಸನಿದಾ ಪದಸನಿ ದಪಪಾ, ಗಮಪ । ಸನಿದನಿನಿಪ ನಿ । ದ ಗರಿಸಾೇ ॥

ಶಿ .ವ ಕಾ. . . ಮೇ. . ಶ್ವರ । ಮ . ನಃ . ಪ್ರಿ । ಯ ಕ.ರೀಂ ॥

ಸಾಸನಿದಾ ನಿಸ ರೀರಿ ಸಾರಿಗ । ಸಸ ರಿಸಸನಿ । ದಾ ದಗರೀೇ ॥

ಶಿ . ವಾ . ನಂ. . ದ ಗುರು. । ಗುಹ ವ.ಶಂ. । . ಕ.ರೀಂ ॥ ॥ಶಿವ॥ 3 ಮತ್ತು 1ನೇ ಸಂಗತಿ.

ಚರಣ

; , ಗಾಗ ಗಗರಿಸನಿ ರೀ ಗ । ಗಾ ನಿನಿದ ಪ । ಗಮಪಾ ॥

. . ಶಾಂ ತಕ. . . ಲ್ಯಾ ಣ। ಗು. ಣ. . ಶಾ । . ಲಿನೀಂ ॥

, ಪಗಮ ಪಾನಿದಪಾ ಸನಿ । ದನಿಪಾ ಸಸ । ನಿ ಗರಿಸಾ॥

ಶಾಂತ್ಯಾತೀ .. ತ ಕ. । ಲಾ. . ಸ್ವರೂ । . ಪಿ.ಣೀಂ॥

ನಿರಿ ಗಮಪಮಗಾ ರೀಸ । ಗರಿಸಾ ಸನಿ । ದಾ ನಿರೀ ॥

ಮಾ. ಧು. . . ರ್ಯ ಗಾನಾ। . ಮೃ.ತ ಮೋ.। . ದಿನೀಂ॥

ಮಾದಾ ನಿರಿನಿದ ಸಾ,ರಿ। ಸನಿದಾ ಪದಪಮ। ಗಾ ರೀಸಾ ॥

ಮ. ದಾ ಲ.ಸಾಂ. ಹಂ । ಸೋ.. ಲ್ಲಾ . . । . . ಸಿನೀಂ॥

ಮಧ್ಯಮಕಾಲ ಸಾಹಿತ್ಯ

ನಿದಾಪಮ ಪಗಾಮರೀ ಗಮಾಪದ । ಪಸನಿದನಿಪಗ । ರಿಸನಿದಮಪದನಿ ॥

ಚಿದಂಬರ ಪುರೀಶ್ವರೀಂ ಚಿ ದಗ್ನಿಕುಂ । . ಡಸಂಭೂ.ತಸ । ಕಲೇ.ಶ್ವರೀಂ . ॥ ॥ಶಿವ॥

ರಾಗ - ತೋಡಿ - ರೂಪಕ ತಾಳ (8ನೇ ಮೇಳಕರ್ತ)
ಮುತ್ತಯ್ಯ ಭಾಗವತರ ರಚನೆ

ಆ ॥ ಸ ರಿ ಗ ಮ ಪ ದ ನಿ ಸ ॥ ಅವ ॥ ಸ ನಿ ದ ಪ ಮ ಗ ರಿ ಸ ॥

ಶು. ಸಾ. ಶು. ಶು. ಕೈ

ಪಲ್ಲವಿ

ಮೀನಲೋಚನಿ ಅಂಬ

ವೇಗನನ್ನು ಬ್ರೋವವೇ ಅಂಬ ॥ಮೀನ॥

ಅನುಪಲ್ಲವಿ

ಮಾನಿನಿಮರಕತಾಂಗಿ ಮಧುರಾಪುರಿ

ರಾಣಿ ಮಾತಂಗಿ ॥ಮೀನ॥

ಚರಣ

ಮಾಣಿಕ್ಯ ವೀಣಾಧರಿ ಮಲಯಧ್ವಜ
ಪಾಂಡ್ಯಕುಮಾರಿ ॥
ಆಣಿಮುತ್ಯಾಲಂಕಾರಿ ಹರಿಕೇಶ
ಪ್ರಿಯೆ ಗೌರಿ ॥ಮೀನ॥

ಭಾವಾರ್ಥ

ಪರಶಿವನಿಗೆ ಪ್ರಿಯಳೂ, ಸಾಧ್ವೀಮಣಿಯೂ, ಮೀನಿನಂತೆ ಚಂಚಲವಾದ ಕಣ್ಣುಗಳಿಂದ ಶೋಭಿಸುವವಳೂ ಮರಕತಮಣಿಯ ತನು ಕಾಂತಿಯುಳ್ಳವಳೂ, ಮಧುರಾ ಪುರಿಯಲ್ಲಿ ನೆಲಸಿರುವವಳೂ, ಮಣಿಖಚಿತ ವೀಣೆಯನ್ನು ಧರಿಸಿರುವವಳೂ, ಮುಕ್ತಾಮಣಿ ಭೂಷಿತಳೂ ಆದ ಗೌರಿಯೇ ನನ್ನನ್ನು ಸಲಹು.

### ರಾಗ - ತೋಡಿ - ರೂಪಕ

ಪಲ್ಲವಿ

1. ಸಾ॰ ರಿಸನಿದಪಮ ॥ ಪ ದ ನಿ ದ ದ ನಿ॥

   ಮೀ. ನ . . . . ॥ ಲೋ.ಚ ನಿ ಅಂಬ॥

2. ಸಾದನಿಸಾರಿಸನಿದಪಮ ॥ ಪ ದ ನಿ ದ ದ ನಿ॥

   ಮೀ . . ನ . . . ॥ ಲೋ.ಚ ನಿ ಅಂಬ॥

3. ಗರಿನಿ ರಿಸನಿದಪಮ ॥ ಪ ದ ನಿ ದ ದ ನಿ॥

   ಮೀ.. ನ . . . . ॥ ಲೋ.ಚ ನಿ ಅಂಬ॥

4. ಗರಿಸನಿದನಿರಿಸನಿದಪಮ॥ ಪ ದ ನಿ ದ ದ ನಿ॥

   ಮೀ .. ..ನ . . . ॥ ಲೋ.ಚ ನಿ ಅಂಬ॥

1. ಸನಿದಪಮಪ ಮಗಮ ॥ ಪದನಿದಪಮಗಮಪದಾನಿ ॥

   ವೇ. .. ಗ . ನ .ನ್ನು ॥ ಬ್ರೋ . ವ . ವೇ. ಅಂಬ ॥

2. ಸನಿದಪಮಪಮಗರಿಸಸನಿ ॥ ದನಿಸರಿಗಮಪದಪದಾನಿ ॥

   ವೇ . . ಗ . ನ . .ನ್ನು. ॥ ಬ್ರೋ.ವ. ವೇ..ಅಂಬ ॥

ಪಲ್ಲವಿಯ 1ನೇ ಸಂಗತಿಯನ್ನು ಹಾಡಿ ನಿಲ್ಲಿಸುವುದು.

ಅನುಪಲ್ಲವಿ

1. ಗಾ ರಿಸ ರಿ ಗ ರಿ ॥ ಸಾರಿಸನಿ ದ ನಿ ಸ ॥

ಮಾ ನಿ. ನಿ..ಮ ॥ ರ. ಕ. . ತಾ ಂ ಗಿ ॥

2. ಗಾ ರಿಸನಿ ಸರಿಗಾರೀ ॥ ಸಾರಿಸನಿ ದನಿಸಾರೀ ॥

ಮಾ ನಿ .. ನಿ. .ಮ ॥ ರ. ಕ . . ತಾಂ . ಗಿ ॥

ಗಗರಿರಿಸನಿದನಿಸರಿಸನಿ ॥ ರಿಸನಿದಪಮಪದಪದಾನಿ ॥

ಮಧುರಾ. . ಪು .ರಿ. ॥ ರಾ. ಣಿ . . ಮಾ.ತಂಗಿ ॥

ಮೀನಲೋಚನಿ 4ನೇ ಸಂಗತಿ

ಚರಣ

1. ಪಾ, ದನಿಪದಪ ॥ ಮಾಪದ ಪಮಗಾ ಮಪ ॥

ಮಾ . . ಣಿ . ಕ್ಯ ॥ ವೀ . . ಣಾ . ಧ ರಿ ॥

2. ಪದನಿಸಾನಿ ಪದನೀದಪ ॥ ಮಾಪದ ಪದಪಮಗಾ ಮಪ ॥

ಮಾ. . . ಣಿ . . ಕ್ಯ . ॥ ವೀ . . ಣಾ . . ಧ ರಿ ॥

ಸನಿದಪ ಪಮಗಾ ರಿಸ ॥ ದನಿಸರಿಗಮ ಪದನಿದಪಮ ॥

ಮ .ಲ. ಯ . . ಧ್ವಜ ॥ ಪಾಂ. ಡ್ಯ . ಕು .ಮಾ.ರಿ. ॥

ಆಣಿಮು ॥ ತ್ಯಾಲಂಕಾರಿ ॥ ಹರಿಕೇಶ॥ ಪ್ರಿಯೆಗೌರಿ ॥

॥ಮೀನಲೋಚನಿ॥

## ರಾಗ - ಚಕ್ರವಾಕ - ಆದಿ ತಾಳ (16ನೇ ಮೇಳಕರ್ತ)
## ಸ್ವಾತಿ ತಿರುನಾಳ್ ಮಹಾರಾಜರ ಕೃತಿ

ಆ ॥ ಸ ರಿ ಗ ಮ ಪ ದ ನಿ ಸ ॥ ಅವ ॥ ಸ ನಿ ದ ಪ ಮ ಗ ರಿ ಸ ॥

ಶು. ಅಂ. ಶು. ಚ. ಕೈ.

### ಪಲ್ಲವಿ

ಸರೋಜನಾಭ ದಯಾರ್ಣವ ಮಾಮವ

ಶಾರದೇಂದುಮುಖ ಶೇಷಪುರಾಲಯ ॥ಸ॥

### ಅನುಪಲ್ಲವಿ

ಧರಾರಮಾ ರಮಣಾಮರ ಪಾಲಕ

ದಾಸಲೋಕಭವಭೀತಿ ವಿನಾಶನ ॥ಸ॥

### ಚರಣ

ಚಾರುರೂಪಧರ ಮದನ ಮನೋಹರಲೀಲ
ಶರಣಾಗತಪಾಲನ ಲೋಲ
ಕಮಲಾಸನ ಸನ್ನುತ ವಾರಣೇಂದ್ರ
ಭಯನಾಶನ ಮಾಧವ ।
ಕಂಬು ಕಂಠವರ ಕೌಸ್ತುಭವಿಲಸಿತ
ಕರಿವರಸುಗಮನ ವಿತರಕುಶಲಮಯಿ ॥ಸ॥

### ಭಾವಾರ್ಥ

ಶರತ್ಕಾಲದ ಚಂದ್ರನಂತೆ ಸುಂದರವಾದ ಮುಖವುಳ್ಳವನೆ, ಪದ್ಮನಾಭನೆ, ಶ್ರೀದೇವಿ, ಭೂದೇವಿಯರ ಒಡೆಯನೆ, ದೇವತೆಗಳನ್ನು ಪಾಲಿಸುವವನೆ, ಭಕ್ತರ ಸಾಂಸಾರಿಕ ಕ್ಲೇಶಗಳನ್ನು ನಿವಾರಿಸುವವನೆ, ಮನ್ಮಥನಂತೆ ಸುಂದರ ರೂಪವುಳ್ಳವನೆ, ಮನಸ್ಸಿಗೆ ಸಂತೋಷವನ್ನುಂಟುಮಾಡುವ ಲೀಲೆಗಳನ್ನು ನಡೆಸಿದವನೆ, ಬ್ರಹ್ಮನಿಂದ ಸೇವಿಸಲ್ಪಡುವವನೆ, ಗಜೇಂದ್ರನ ಕಷ್ಟವನ್ನು ಪರಿಹರಿಸಿದವನೆ, ಶಂಖದಂತೆ ಕತ್ತುಳ್ಳವನೆ, ಶ್ರೇಷ್ಠವಾದ ಕೌಸ್ತುಭಮಣಿಯಿಂದ ವಿರಾಜಮಾನನಾಗಿರುವವನೆ, ಶ್ರೇಷ್ಠವಾದ ಆನೆಯಂತೆ ನಡಿಗೆ ಉಳ್ಳವನೆ, ನನಗೆ ಕ್ಷೇಮವನ್ನುಂಟುಮಾಡಿ ಕಾಪಾಡು.

## ರಾಗ - ಚಕ್ರವಾಕ - ಆದಿ

### ಪಲ್ಲವಿ

ಸಸಾಸ ಸನಿನಿದ ಪಾಪಮ। ದಪಾಮ ಮಗಪಮ । ಮಗರೀ ರಿಸ ॥

ಸರೋಜನಾ . . ಭ ದ . । ಯಾ .. ರ್ಣ. ವ. । ಮಾ. ಮವ ॥

1. ರಿಸನಿದ ನೀಸಾರಿ ಗರಿಗಾ । ಗಮಪಮ । ಪಾದನಿ ॥

ಶಾ. . . ರದೇಂದು ಮು.ಖ । ಶೇ. ಷವು । ರಾಲಯ ॥

2. ಸಸನಿರಿಸನಿದ ನಿಸನಿದಪಾಪಮ । ದಪಾಮ ಮಗಪಮ । ಮಗರೀರಿಸ ॥

ಸರೋ..ಜ. ನಾ . . ಭ ದ. । ಯಾ . ರ್ಣ .ವ. । ಮಾ.ಮವ ॥

2. ರಿಸನಿದನೀ ಸಾರಿ ಗರಿಗಾ । ಪಮಗರಿಸರಿಗಮ। ಪಾದ ನಿ॥

ಶಾ . . ರ ದೇಂದುಮು.ಖ। ಶೇ . ..ಷ .ವು.। ರಾಲಯ॥

ಸಾಸನಿರಿಸನಿದ ನಿಸರೀ ಸಾ । ಸಾ ೯೯ । ಸಾ೯೯ ॥

ಸರೋ . .ಜ. ನಾ . ಭ । . . । . . ॥

### ಅನುಪಲ್ಲವಿ

ಸಾ ಸನಿನಿದ ನಿಸಾರಿಸ । ನಿ ಗ ರಿಸ । ರಿಸನಿದ ನಿಸ ॥

ಧ ರಾ.. . ರಮಾರಮ । ಣಾ.ಮರ । ಪಾ . . ಲಕ ॥

ಸನಿಸನಿದಪ ಮಪದನಿಸಾ ನಿಸರೀ । ಸರಿಗಮಗರಿಸಾ । ರಿಸನಿದನಿಸ ॥

ಧ.ರಾ . ರ .ಮಾ . ರ.ಮ. । ಣಾ . . ಮರ । ಪಾ . ಲಕ ॥

ನಿರಿ ಸನಿ ನಿದ ಪಮ । ದಪಾಮಗರಿ । ಗಮಪಪ ॥

ದಾ. ಸಲೋ.ಕ ಭವ । ಭೀ . ತಿ। ವಿನಾಶನ ॥

ಸನಿಗರಿಸಾ ಸನಿನಿದಪಾ ದನಿಸರಿ । ಗರಿಸನಿ ರಿಸನಿದ । ಸನಿದಪ ಮಪದನಿ ॥

ದಾ. .ಸ ಲೋ ಕ ಭ . ವ.। ಭೀ. . ತಿ. ವಿ. । ನಾ . ಶ . ನ . ॥

ಸರೋಜನಾಭ - 2ನೇ ಸಂಗತಿ

ಚರಣ

ಪಾಮ ಮಗಪಮಗರಿ ರಿಸ । ಗ ಮ ಗರಿ । ರಿಸನಿದ್ದ ನೀಸರಿ ॥

ಚಾರು ರೂ . . ಪ. ಧರ । ಮದನ ಮ । ನೋ . ಹರ. ॥

ಗರಿಗಾ ೯ ೯ ಮಗಮಪ । ಮಗರೀಸಸ । ರಿಸನಿದ ನೀ ಸರಿ॥

ಲೀ.ಲ . . ಶ . ರ . । ಣಾ . ಗತ । ಪಾ . ಲ ನ. ॥

ಗ ರಿ ಗಾೀ ಮಗಮಪ । ಮಗರೀ ಸಸ । ಸನಿರಿಸ ನಿದನೀ ॥

ಲೋ.ಲ... ಕ. ಮ. । ಲಾ. . ಸನ । ಸ. . .ನ್ನು.ತ ॥

ಸಾ ರಿ ಗಾ ಮ ಪ ದ । ನಿಸಸಿವ ಪಮ । ಪಾಪಪ ॥

ವಾ ರಣೇಂದ್ರ ಭಯ । ನಾ . . ಶನ । ಮಾಧವ ॥

, ನಿ ದ ನಿ ಸ ನಿ ರಿ ಸ । ೯ ನಿಗಾರಿಸಾ । ರಿಸನಿದ ನಿಸ॥

. ಕಂಬುಕಂ . ಠ ವ ರ । . ಕೌ. ಸ್ತುಭ । ವಿ.ಲ. ಸಿತ॥

2. , ನಿದ ನಿ ಸ ನಿ ರಿಸರೀ । ೯ ಗಮಗರಿಸಾ । ರಿಸನಿದ ನಿಸ ॥

. ಕಂಬು ಕಂ ಠ ವ .ರ । . ಕೌ..ಸ್ತುಭ । ವಿ .ಲ. ಸಿತ ॥

- ನಿಸಾರಿಸಾ ಸನಿನಿದಪಪ । ೯ ಗಮಾಗರೀ । ಗಮಪಾದನಿ ॥

- ಕರಿ ವರ ಸು.ಗ.ಮನ । . ವಿತ ರ ಕು । ಶಲ ಮಯಿ. ॥

ಸರೋಜನಾಭ 2ನೇ ಸಂಗತಿ

ಶಾರದೇಂದುಮುಖ 2ನೇ ಸಂಗತಿ ಹಾಡಿ

ನಿಲುಗಡೆ ಸಂಗತಿಯಲ್ಲಿ ಮುಕ್ತಾಯ ಮಾಡಬೇಕು.

## 22. ವಿಳಂಬಕಾಲದ ಕೃತಿಗಳು

ರಾಗ - ವಾಚಸ್ಪತಿ - ಆದಿ ತಾಳ 2 ಕಳೆ (64ನೇ ಮೇಳಕರ್ತ)

ಸ್ವಾತಿ ತಿರುನಾಳ್ ಮಹಾರಾಜರ ಕೃತಿ

ಆ ॥ ಸ ರಿ ಗ ಮ ಪ ದ ನಿ ಸ ॥ ಅವ ॥ ಸ ನಿ ದ ಪ ಮ ಗ ರಿ ಸ ॥
ಚ. ಅಂ. ಪ್ರ. ಚ. ಕೈ.

ಪಲ್ಲವಿ

ಪಾಹಿ ಜಗಜ್ಜನನಿ ಸಂತತಂ

ಪಂಕೇರುಹಾಸನ ಜಾಯೇ ಅಂಬ ॥ಪಾ॥

ಅನುಪಲ್ಲವಿ

ಮೋಹನ ತರಗಾತ್ರಿ ಮುನಿ ಸಮುದಯಗೇಯೇ

ಮಹನೀಯಸುಚರಿತೇ ಮಾನಿತ ಗುಣಾವಾಸೇ ॥

ಚರಣ

ಸೋಮಬಿಂಬಮದಾಪಹ ಸುಮುಖಿ ಪರಿಲಸ
ಮಮರಸನಾಗ್ರೇಸದಾ ಮುಕುರಶ ಕಲದಂತಿ ।
ಶಮಲಜಾತಂ ವಾರಯ ಸಾಧುಜನ ಸೇವಿತೇ
ಕಮಲನಾಭಸೇವಕ ಕಾಮದಾನ ನಿರತೇ ॥ ॥ಪಾಹಿ॥

ಭಾವಾರ್ಥ

ಬ್ರಹ್ಮನ ಪತ್ನಿಯೂ, ಜಗತ್ತಿಗೆ ತಾಯಿಯೂ ಆದ ಸರಸ್ವತಿದೇವಿಯೆ ನನ್ನನ್ನು ಯಾವಾಗಲೂ ಕಾಪಾಡು. ಅತ್ಯಂತ ಸುಂದರವಾದ ಶರೀರವುಳ್ಳವಳೆ, ಋಷಿಗಳ ಸಮುದಾಯದಿಂದ ಸ್ತುತಿಸಲ್ಪಡುವವಳೆ, ಶ್ರೇಷ್ಠವಾದ ನಡತೆಯುಳ್ಳವಳೆ, ಗೌರವವಾದ ಗುಣಗಳಿಗೆ ನೆಲೆಯಾದವಳೆ, ಚಂದ್ರಬಿಂಬದ ಅಹಂಕಾರವನ್ನು ಮುರಿಯುವ ಸುಂದರವಾದ ಮುಖವುಳ್ಳವಳೆ, ಮೊಗ್ಗಿಗೆ ಸಮಾನವಾದ ಹಲ್ಲುಗಳುಳ್ಳವಳೆ, ಸಾಧುಜನರಿಂದ ಸೇವಿಸಲ್ಪಡುವವಳೆ, ಶ್ರೀ ಹರಿಯನ್ನು ಸೇವಿಸುವವಳೆ, ಇಷ್ಟಾರ್ಥಗಳನ್ನು ಕೊಡುವವಳೆ ನನ್ನನ್ನು ಕಾಪಾಡು.

## ರಾಗ - ವಾಚಸ್ಪತಿ - ಆದಿ - 2 ಕಳೆ

### ಪಲ್ಲವಿ

; ಪಾ, ದನಿದ ದಪಪಾ, ಪಮಗರೀಗಮಾ । ಪಾ, ದ ನೀ ; ನಿದಾನಿ ।

. ಪಾ. . . ಹಿ ಜ . . ಗ . . . ಜ್ಜ ನ । ನಿ . . . ಸಂ . ।

ಸಾ, ದದನಿ ದಪಪಾ, ॥

. . ತ . ತಂ . ॥

ಪಮ x ಪಾ, ದ ನಿದ ದಪಪಾ, ಮದಪಮ ಗರೀಗಮಾ । ಪಾದನಿದ ನಿದಪಮಾ,

. . ಪಾ. . . ಹಿ ಜ . . ಗ . . . . ಜ್ಜನ । ನಿ . . . . . ।

ಮಪದನಿ । ಸಾ, ದದನಿ ದಪಪಾ, ॥

ಸಂ . । . . ತ . ತಂ . ॥

ನಿದಪಮ x ಪದನೀರಿಸ ನಿದ ದಪಪಾ, ಪದನಿದಪಮಗರಿಗಮಾ । ಪದನಿದನೀ

. . . ಪಾ . . . . ಹಿ ಜ . . ಗ . . . . . ಜ್ಜನ । ನಿ . . . ।

ದಪಮಾ ಮಪದನಿ । ಸಾ ಸನಿರಿಸನಿದಪಮ ಪದಪಮ॥

. . ಸಂ . । . ತ . . . ತಂ . . ॥

ಗರಿಗಮ x ಪಾ, ದಪಮಗಾ ಗರಿ ರಿಗರಿಗಗರಿಸಾ, ರಿರೀ। ; ಗಮಪಾ,

. . . . ಪಂ ಕೇ . . . ರು . . ಹಾ. ಸನ । . ಜಾ . .

ದನಿಸಾೕ । ದನಿಸರಿ ಗರಿ ಸರಿಸಸನಿದಪನಿ ॥

ಯೇ. . । . . . . . ಅಂ . . ಬ ॥

ದದಪಮ x

. . . . x ಪಾಹಿಜಗಜ್ಜನನಿ 1ನೇ ಸಂಗತಿ

**ಅನುಪಲ್ಲವಿ**

; ಸಾ, ನಿದಾನೀಸಾ ಸನಿನಿದ ನಿಸ ॥ ; ಸನಿರೀ ೯ ಸಸಾ,ನಿ ।

. ಮೋ.ಹನತ ರ ಗಾ . . ತ್ರಿ. ॥ . ಮು.ನಿ. ಸಮು . ।

ನಿದಾನಿ ಸಾ,ನಿ ದನಿ ದಪಪಾ ॥

ದ . . ಯ . ಗೇ. ಯೇ . ॥

ಮಪದನಿ x ಸನಿರಿಸಾರಿ ನಿದಾ ನೀಸಾಸನಿನಿದ ನಿಸ । ಸರಿ ಗ ರಿ ಸಾ ಸ ನಿ ।

. . . x ಮೋ. . . ಹನ ತ ರಗಾ . . ತ್ರಿ . । . ಮುನಿ ಸ ಮು. ।

ದನಿಸರೀಸ ಸನಿನಿದ ಪನಿ ದಪಪಾ,॥

ದ . . . ಯ . . ಗೇ. ಯೇ . ॥

ಮಪದನಿ x ಸರಿಗಮಪಮಗರೀಸ ಸನಿರಿಸ ಸನಿನಿದ ಪಪಾಮ ಪದನಿಸ।

. . . . x ಮಹನೀ. . .ಯ . ಸು . . ಚ . . ರಿ . ತೇ . ।

ರಿಸಸನಿಸರಿಸರಿ ನಿದಾ । ಪದನಿದ ಪಮಗರಿ ಗಮಪಾ ॥

. .ಮಾ. . . ನಿತ । ಗು . ಣಾ. . ವಾ.ಸೇ ॥

2. ಸರಿಗಮಪಮಗರೀಸ ಸನಿರಿಸಸನಿನಿದ ಪಪಾಮ ಪದನಿಸ । ರಿಸ

ಮಹನೀ . . ಯ . ಸು . .ಚ . . ರಿ . ತೇ . ।

ಸನಿಸರಿಸರಿ ನಿದಾ । ಪದನಿದ ಪಮಗರಿಗಮಪದನಿಸರಿಸ ॥

ಮಾ. . . ನಿ ತ । ಗು . . ಣಾ . ವಾ . . . ಸೇ. ॥

ನಿದಪಮ x

. . . . **ಪಾಹಿಜಗಜ್ಜನನಿ 3ನೇ ಸಂಗತಿ**

ಚರಣ

; ಪಾಪಪಾ ಮದಪಮಗಾ ಗರೀ ಗರಿಸಾ ೯। ; ಸನಿರಿಸಸನಿನಿದ ನೀ। ;

ಸೋಮಬಿಂಬ .ಮ . ದಾ . ಪ .ಹ . । . ಸು.ಮು.ಖಿ . . . ।

ಸರೀ ಗಮಪಾ, ॥

ಪ ರಿ ಲ . ಸ . ॥

ಪಮ x ಪದನೀ ದಾಪಾ ಮದಪಮಗಾ ಗರೀ ಗರಿಸಾ೯ । ; ಸನಿರಿಸಸನಿನಿದ ನೀ । ;

. . x ಸೋಮ ಬಿಂ ಬ . ಮ . ದಾ. ಪ .ಹ .। . ಸು.ಮು.ಖಿ . . . ।

ಸರೀ ಗಮಪಾ೯ ॥

ಪ ರಿ ಲ . ಸ ॥

ಪದ x ನಿ ದ ಪಾಮಾ ದಪಮಗ ಗರೀ ಗಮಪಾದ। ಪನಿದಪಮಪಾ,

. . x ಮಮ ರ ಸ ನಾ . . ಗ್ರೇ . ಸ . ದಾ.। . . ಮು . ಕು.

ದನಿಸಾ, । ಸರಿನೀ ನಿದ ನಿಸನಿದಪಾ ॥

ರ. ಶ. । ಕ . . ಲ . ದಂ . .ತಿ ॥

; ಸಸ ಸನಿನಿದ ನೀಸಾರಿಸನಿದಾ೯ನಿಸಾ । ; ಸನಿರೀ ೯ಸಸಾ,ನಿ ।

ಶಮಲ.ಜಾತಂ ವಾ . . ರಯ । . ಸಾ.ಧು.ಜನ . ।

ನಿದಾನಿಸಾ,ನಿ ದನಿ ದಪಪಾ೯ ॥

ಸೇ . . . . ವಿ ತೇ . . ॥

ಮಪದನಿ x (ಅನುಪಲ್ಲವಿಯಂತೆ ಹಾಡುವುದು)

. . . x ಕಮಲನಾಭಸೇವಕ । ; ಕಾಮದಾ । ನ ನಿರತೇ ॥

---------

### ರಾಗ - ಸಿಂಹೇಂದ್ರ ಮಧ್ಯಮ - ಮಿಶ್ರ ಛಾಪು
### ವಾಸುದೇವಾಚಾರ್ಯರ ಕೃತಿ

ಆ ॥ ಸ ರಿ ಗ ಮ ಪ ದ ನಿ ಸ ॥ ಅವ ॥ ಸ ನಿ ದ ಪ ಮ ಗ ರಿ ಸ ॥

ಚ. ಸಾ. ಪ್ರ. ಶು. ಕಾ.

**ಪಲ್ಲವಿ**

ನಿನ್ನೇ ನಮ್ಮಿತಿನಯ್ಯ ಶ್ರೀರಾಮ ॥

**ಅನುಪಲ್ಲವಿ**

ಪನ್ನಗೇಂದ್ರಶಯನ ಪನ್ನಗಾರಿವಾಹನ ।
ಪನ್ನಗಾಚಲ ಭವ್ಯಸದನ ಪ್ರಸನ್ನಾರ್ತಿ
ಹರಣ ನಿಪುಣ ॥ನಿನ್ನೇ॥

**ಚರಣ**

ಪರಮಕೃಪಾ ಸಾಗರ ಪರತತ್ವಾಧಾರ
ವರಮುಲೊಸಗಿ ಬ್ರೋವವಯ್ಯ
ಪರವಾಸುದೇವ ।
ನೀರಜ ನೇತ್ರ ನೀರದ ನಿಭಗಾತ್ರ
ಗಿರಿರಾಜಸುತಾ ವರಶಂಕರ
ಸನ್ನುತಿ ಪಾತ್ರ ಸಚ್ಚರಿತ್ರ ॥ನಿನ್ನೇ॥

**ಭಾವಾರ್ಥ**

ಶ್ರೀರಾಮ ! ಆದಿಶೇಷನ ಮೇಲೆ ಮಲಗಿರುವವನೆ, ಗರುಡವಾಹನನೆ, ಪನ್ನಗಾಚಲದಲ್ಲಿ ನೆಲೆಸಿರುವವನೆ, ಮೊರೆಹೊಕ್ಕವರ ಕಷ್ಟಗಳನ್ನು ನಿವಾರಿಸುವುದರಲ್ಲಿ ನಿಪುಣನೆ, ದಯಾ ಸಾಗರನೆ, ಪರವಾಸುದೇವನೆ, ಕಮಲದಂತೆ ಕಣ್ಣುಗಳನ್ನೂ, ಕಾಂತಿಯುತ ಶರೀರವನ್ನು ಉಳ್ಳವನೆ, ಪಾರ್ವತೀ ಪತಿ ಪರಮೇಶ್ವರನ ಸ್ತೋತ್ರಕ್ಕೆ ಪಾತ್ರನಾದವನೆ, ಶ್ರೇಷ್ಠವಾದ ಚಾರಿತ್ರ್ಯವುಳ್ಳ ನಿನ್ನನ್ನೇ ನಂಬಿದ್ದೇನೆ.

## ರಾಗ - ಸಿಹ್ಮೇಂದ್ರ ಮಧ್ಯಮ - ಮಿಶ್ರಛಾಪು

### ಪಲ್ಲವಿ

ಪಾ; ; ಪಮಗಾ ಗಾರೀ ॥ ರೀಸಾಸಾ, ನಿ಼ಧಾ಼ನೀ಼ ॥
ನಿ . . ನ್ನೇ . . ನ . ॥ ಮ್ಮಿ.ತಿ. ನ . . . ॥
ಸಾ ; ; ; ; ಗಾರೀ ॥ ಗಾಮಾ; ಪದನಿದ ದಪಪಮ ॥
ಯ್ಯ . . ಶ್ರೀ . ॥ ರಾ . ಮ . . . . . ॥

2. ಪಾ;ಮಾ ಪಾದನಿದಪಮಾ ॥ ಗಪಮಗರೀಸಾ, ನಿ಼ಧಾ಼ನೀ಼ ॥
ನಿ . ನ್ನೇ . ನ . . ॥ ಮ್ಮಿ. . ತಿ ನ . . .. ॥
ಸಾ; ; ; ; ಗಾರೀ ॥ ಗಾಮಾ ; ಪದನಿಸ ನಿದಪಮ ॥
ಯ್ಯ . . ಶ್ರೀ . ॥ ರಾ . ಮ . . . . . ॥

3. ಪಾ ; ಪಮ ಪದನಿಸ ರಿಗರೀ ಸನಿ ॥ ದನಿನಿದಪಮ ದಪಮಗ ಗರಿರೀ ॥
ನಿ . . . ನ್ನೇ . ನ . .. . ॥ ಮ್ಮಿ.ತಿ. .. . ನ . . . . . . . ॥
ಸಾ ; ; ; ; ಗಾರೀ ॥ ಗಾಮಾ ; ಪದನಿಸ ನಿದಪಮ ॥
ಯ್ಯ ಶ್ರೀ. ॥ ರಾ. . ಮ . . . . ॥

ನಿನ್ನೇ ನಮ್ಮಿತಿನಯ್ಯ 1ನೇ ಸಂಗತಿ.

### ಅನುಪಲ್ಲವಿ

; ಸಾಸಾ ಸನಿದಾದಪಮಾ ॥ ದಾನೀ ; ಸಾ ; ಸಾ; ॥
- ಪ ನ್ನ ಗೇಂ . ದ್ರ . . . ॥ ಶ ಯ ನ . . . ॥
; ಸನಿಸಾ ರೀ ; ರೀ ; ॥ ಗರಿರೀ ; ಗರಿಸನಿ ದಪದನಿ ॥
-ಪ. ನ್ನ ಗಾ - ರಿ - ॥ ವಾ. . ಹ . . ನ . . ॥
ಸಾ x ಸನಿಸರಿ ಸನಿದನಿನಿದಪಮ ॥ ದಾನೀ ; ಸಾ ; ಸಾ; ॥
. x ಪ.ನ್ನ. ಗೇಂ .. ದ್ರ ... ॥ ಶ ಯ ನ... ॥
; ರಿನಿಸಾ ರೀ ; ರೀ ; ॥ ಪದನಿಸರಿಗ ಗರಿರೀ ಸಾ ; ॥
.x ಪ.ನ್ನ ಗಾ . ರಿ ॥ ವಾ. . . ಹ .. ನ ॥

ಗಾರೀಗಾ ಗಮಪಮ ಗಾರೀ ॥ ಸನಿಸರಿಸರಿ ಸನಿದಾನೀ; ॥

ಪ . ನ್ನ ಗಾ . . ಚಲ ॥ ಭ . .ವ್ಯಸ . ದ ನ ॥

ಸನಿಸಾರಿ ಸನಿದಾ ಪಾಮಾ ॥ ಪಮನಿದಪಮ ಪಮಗರಿ ಸರಿಗಮ ॥

ಪ್ರ . ಸ . ನ್ನಾ . . ರ್ತಿ ॥ ಹ . ರ. ಣ . ನಿ . ಪು. ಣ . . ॥

ನಿನ್ನೇನಮ್ಮಿತಿ - ಕಡೇ ಸಂಗತಿ.

ಚರಣ

; ಸಾಸಾ ಪಾ ಮಾ ಪಾ ; ॥ ಪಮಪದಪದ ಪಮಗಾ ಗಾರೀ ॥

- ಪ ರ ಮ ಕೃ ಪಾ ॥ ಸಾ . . . . . . . ಗ ರ ॥

-ಗಾರೀ ಸರಿಗರಿ ಸಾ ; ॥ ಗರಿಸನಿದಾ ನೀ; ಸಾ; ॥

-ಪ ರ ತ . . ತ್ವಾ . ॥ . . . . ಧಾ. ರ. ॥

-ಗಾರೀ ಗಾಮಾ ಪಾಮಾ ॥ ಪದನಿದಪಾ ಪಮಗಾ ಮಾ; ॥

-ವ ರ ಮುಲೊ ಸ ಗಿ ॥ ಬ್ರೋ . ವ ವ . . ಯ್ಯ. ॥

-ಪದಪದ ಪಮಗಾ ರೀಗಾ ॥ ಮಾಪಾ ; ಪಮನಿದ ದಪಪಾ ॥

-ಪ . ರ .ವಾ. . . ಸು ॥ ದೇ. . . . . ವ . . ॥

ಅನುಪಲ್ಲವಿಯಂತೆ

; ನೀರಜ ॥ ನೇತ್ರ ॥ ; ನೀರದ ॥ ನಿಭಗಾತ್ರ ॥

ಗಾರೀಗಾ ಪಮಗಾ ರೀಸಾ ॥ ; ಸರಿಸರಿ ಸನಿದಾ ನೀನೀ ॥

ಗಿ ರಿ ರಾ . . ಜ ಸುತಾ ॥ . ವ. ರ. ಶಂ . ಕ. ರ ॥

ನೀರಿನಿದಾ ಪಾಪಮ ಗಾರೀ ॥ ಸಾ; ಪಾ ಪದನಿದ ನಿದಪಮ ॥

ಸ. . ನ್ನು. ತಿಪಾ. . ತ್ರ ॥ ಸ . ಚ್ಚ ರಿ . . ತ್ರ . ॥

ನಿನ್ನೇನಮ್ಮಿತಿ - 3ನೇ ಸಂಗತಿ.

## ರಾಗ - ಖರಹರಪ್ರಿಯ - ಮಿಶ್ರ ಛಾಪು
## ತ್ಯಾಗರಾಜರ ಕೃತಿ - 22ನೇ ಮೇಳಕರ್ತ

### ಪಲ್ಲವಿ

ಪಕ್ಕಲ ನಿಲಬಡಿಗೊಲಿಚೇಮುಚ್ಚಟ

ಬಾಗದೆಲ್ಪರಾದಾ ॥

### ಅನುಪಲ್ಲವಿ

ಚುಕ್ಕಲ ರಾಯನಿ ಗೇರು ಮೋಮುಗಲ ।

ಸುದತಿ ಸೀತಮ್ಮ ಸೌಮಿತ್ರಿ ರಾಮುನಿಕಿರು ॥ ॥ಪಕ್ಕಲ॥

### ಚರಣ

ತನುವು ಚೇ ವಂದನ ಮೊನರಿಂಚು ಚುನ್ನಾರಾ

ಚನುವುನ ನಾಮಕೀರ್ತನಸೇಯು ಚುನ್ನಾರಾ

ಮನಸುನ ದಲಚಿ ಮೈಮರಿಚಿಯುನ್ನಾರಾ

ನೆನರುಂಚಿ ತ್ಯಾಗರಾಜುನಿತೋ ಹರಿಹರಿ ಮೀರಿರು ॥ಪಕ್ಕಲ॥

### ಭಾವಾರ್ಥ

ಚಂದ್ರನನ್ನೂ ನಾಚಿಸುವಂಥಾ ಮುಖವುಳ್ಳ ಮತ್ತು ಸುಂದರವಾದ ದಂತ ಪಂಕ್ತಿಯುಳ್ಳ ಸೀತಮ್ಮನೇ ಮತ್ತು ನಿಷ್ಠಾವಂತ ಲಕ್ಷ್ಮಣನೇ ನೀವು ಶ್ರೀರಾಮನ ಅಕ್ಕಪಕ್ಕಗಳಲ್ಲಿ ನಿಂತು ಸೇವೆ ಮಾಡುವ ಮರ್ಮವನ್ನು ದಯವಿಟ್ಟು ನನಗೆ ತಿಳಿಸಬಾರದೆ? ನೀವು ಶ್ರೀರಾಮನಿಗೆ ಸಾಷ್ಟಾಂಗ ನಮಸ್ಕಾರಗಳನ್ನು ಮಾಡುವಿರಾ? ನೀವು ಭಕ್ತಿಯಿಂದ ರಾಮನ ನಾಮ ಸಂಕೀರ್ತನೆಯನ್ನು ಮಾಡುವಿರಾ? ಮೈಮರೆತು ಆತನನ್ನು ಧ್ಯಾನಿಸುವಿರಾ? ಈ ರಹಸ್ಯವನ್ನು ನನಗೆ ದಯವಿಟ್ಟು ತಿಳಿಸುವಿರಾ?

## ರಾಗ - ಖರಹರಪ್ರಿಯ - ಮಿಶ್ರಛಾಪುತಾಳ - 22ನೇ ಮೇಳಕರ್ತ

### ಪಲ್ಲವಿ

; ; ಪಾದಾಸನಿ ನಿದದಪ ॥ ಸಾನೀ ; ನಿದದಪ ಮಾ ; ॥

. . ಪ ಕ್ಕ . . ಲ . . ॥ ನಿ ಲ . ಬ . . ಡಿ . ॥

; ಪಾದಾ ಪದನಿದ ನೀ ; ॥ ನಿದದಪಮಾ ಗಾ ; ಗರಿರೀ ॥

. ಗೊಲಿ ಚೇ . . . . ॥ ಮು . . ಚ್ಚ . ಟ .. ॥

- ಸರಿಗಾ ರಿಗಮಾ ಪದನೀ ॥ ನಿದದಪಮಾ ಗಾ ; ಗರಿರೀ ॥

ಬಾ . ಗ . . ದೆ . ॥ . . . ಲ್ಪ ರಾ . . ॥

ಸಾ ; ; ; ; ಸನಿಸಾ ॥ ರಿಗಮಪದನಿ ಸಾರಿಸನೀಸನಿ ದಾನಿದ ಪಾದಪ ॥

ದಾ . . . . . . . ॥ . . . . . . . . . . ॥

2. ಮಾ x ಪದಪದನೀ ದನಿದನಿಸಾ ನಿಸ ನಿಸರೀ ॥ ಗರಿಸರಿಸನಿ ನಿದದಪಮಾ ; ॥

- x ಪ . . . ಕ್ಕ . . . ಲ . . ॥ ನಿ ..ಲ. . ಬ . . ಡಿ ॥

; ಪಾದಾ ಪದನಿದನೀ ; ॥ ನಿದದಪಮಾ ಗಾ ; ಗರಿರೀ ॥

- ಗೊಲಿ ಚೇ . . ॥ ಮು . . ಚ್ಚ . ಟ. . ॥

- ಸರಿಗಾ ರಿಗಮಾ ಪದನೀ ॥ ನಿದದಪಮಾ ಗಾ ; ಗರಿರೀ ॥

- ಬಾ .. ಗ . . ದೆ . ॥ . . ಲ್ಪ ರಾ . . ॥

ಸಾ ; ; ; ; ಸನಿಸಾ ॥ ರಿಗಮಪದನಿ ಸಾರಿಸನೀಸನಿ ದಾನಿದ ಪಾದಪ ॥

ದಾ . . . . . . . ॥ . . . . . . . . . . ॥

ಮಪಾಮ = ಪಾದಾಸನಿ ನಿದದಪ ॥ ಸಾ ನೀ ; ನಿದದಪ ಮಾ; ॥

. . . ಪ ಕ್ಕ . . ಲ . ॥ ನಿ ಲ . ಬ . . ಡಿ . ॥

ಪಾ ; ; ; ; ; ; ॥ ಪಾ; ; ಪಾ ; ಪಾ ; ॥

. . . . . ॥ . . . . . . ॥

**ಅನುಪಲ್ಲವಿ**

; ; ಸಾ ರೀ ; ರೀ ; ॥ ಸರಿಗಾ; ಗರಿರೀ ಸಾ; ॥

. . ಚು ಕ್ಕ . ಲ . ॥ ರಾ ... ಯ. . ನಿ. ॥

2. ನಿಸಾನಿ x ಸಾ ರಿಗರಿಗ ಸರೀ ॥ ಸರಿಗಾಮಗಗಾ ರೀಗರಿರೀ ಸಾರಿಸಸಾ॥

. . . x ಚು ಕ್ಕ . . ಲ. ॥ ರಾ . . . ಯ .. ನಿ . . ॥

ನಿಸಾನಿ x ಸಾರಿಗರಿಗ ಸರೀ ॥ ರಿಗಮಾಪಮಮಗ ಗರಿರೀ ಸಾ ॥

. . . x ಚು ಕ್ಕ . . ಲ . ॥ ರಾ . . . . ಯ . ನಿ . ॥

; ನೀ ; ಸರಿಗಾಗರಿರಿಸ ॥ ನಿರಿಸ ನೀ ನಿದದಾ ಪಾ ॥

- ಗೇ . . . ರು . . ॥ ಮೋ.ಮು ಗ . . ಲ . ॥

- ಸಾಸಾನೀ ; ನಿದದಪ ॥ ಸನಿನಿದದಪ ಮಾ; ರೀಗಾ ॥

- ಸು ದತಿ . ಸೀ . . ॥ ತ . . . . ಮ್ಮ ಸೌ . ॥

ಮಗಗರಿರೀ ಸಾ; ನಿಸಾನಿ ॥ ಸರಿಗರಿಗಮ ಪಮದಪ ಪಮಗರಿ ॥

ಮಿ . . .. ತ್ರಿ. ರಾ . ॥ ಮು.ನಿ . ಕಿ . . . ರು . . ॥

ಗಮ x

. . x ಪಕ್ಕಲನಿಲಬಡಿ - 2 ನೇ ಸಂಗತಿ

**ಚರಣ**

; ನೀದಾಪಾ; ಪಾ; ॥ ಮಗಮಾಪಮಮಗ ರೀಗಾ ಗರಿರೀ ॥

- ತ ನು ವು .ಚೆ. ॥ ವಂ . . . ದ . ನ . . ॥

2. - ನೀದಾ ಪದನಿದ ಪಾ; ॥ ಮಗಮಾಪಮಮಗ ರೀಗಾ ಗರಿರೀ ॥

- ತ . ನು ವು . ಚೆ . ॥ ವಂ . . . ದ . ನ . . ॥

- ರೀಗಾ ಮಪದನಿ ದಾನಿದ ॥ ಪಾಮಪದಪಮಾ ರೀಗಾ ಗರಿರೀ ॥

- ಮೊನ ರಿಂ . ಚು . ॥ ಚು . . . ನ್ನಾ . ರ . ॥

- ಪಾಮಾ ಗಾ ; ಗರಿರೀ ॥ ರಿಸನ಼ಿಸಾನ಼ಿ ಸರಿಗಾ ರಿಗಮಾ ॥

- ಚ ನು ವು . ನ .. ॥ ನಾ . . ಮ . ಕೀ . . ॥

; ಪಾಮಾ ಮರಿಗಾ ಗರಿರೀ ॥ ರಿಗಮಪದನಿ ನಿದದಾ ಪಾ ;॥

- ರ್ತ ನ ಸೇ. . ಯು. ॥ ಚು . . . . ನ್ನಾ . . ರ . ॥

ಅನುಪಲ್ಲವಿಯಂತೆ

; ಮನಸುನ ॥ ದಲಚಿಮ್ಮೆ ॥ ; ಮರಚಿ ॥ ಯುನ್ನಾರ ॥

ನೆನರುಂಚಿ ॥ ತ್ಯಾಗರಾ ॥ ಜುನಿತೋ ಹರಿ ॥

ಹರಿ ಮೀರಿರು **॥ ಪಕ್ಕ॥**

------------

## ರಾಗ - ಮೋಹನ - ಆದಿ - 2 ಕಳೆ

## ತ್ಯಾಗರಾಜರ ಕೃತಿ

ಆ ॥ ಸ ರಿ ಗ ಪ ದ ಸ ॥

ಚ. ಅಂ. ಚ.

ಅವ ॥ ಸ ದ ಪ ಗ ರ ಸ ॥

### ಪಲ್ಲವಿ

ನನ್ನು ಪಾಲಿಂಪ ನಡಚಿವಚ್ಚಿತಿವೋ

ನಾಪ್ರಾಣನಾಥ ॥ನನ್ನು॥

### ಅನುಪಲ್ಲವಿ

ವನಜ ನಯನ ಮೋಮುನು ಜೂಚುಟಜೀ-

-ವನ ಮನಿ ನೆನರುನ ಮನಸು ಮರ್ಮಮುದೆಲಿಸಿ

॥ನನ್ನು॥

### ಚರಣ

ಸುರಪತಿ ನೀಲಮಣಿ ನಿಭತುನುವು ತೋ

ಯುರಮುನ ಮುತ್ಯಪು ಸರುಲ ಚಯಮುತೋ

ಕರಮುನಶರ ಕೋದಂಡ ಕಾಂತಿತೋ

ಧರಣಿತನಯತೋ ತ್ಯಾಗರಾಜಾರ್ಚಿತ ॥ ॥ನನ್ನು॥

### ಭಾವಾರ್ಥ

ಶ್ರೀರಾಮ ! ನನ್ನ ಪ್ರಾಣದ ದೊರೆಯೆ (ಪ್ರಾಣನಾಥನೆ), ಕಮಲದಂತೆ ಕಣ್ಣುಳ್ಳ ನಿನ್ನ ಮುಖವನ್ನು ನೋಡುವುದೇ ನನ್ನ ಜೀವನೋದ್ದೇಶವೆಂಬ ರಹಸ್ಯ (ಮರ್ಮ)ವನ್ನು ತಿಳಿದು ನನ್ನನ್ನು ಕಾಪಾಡಲು ನಡೆದೇ ಬರುತ್ತಿದ್ದೀಯ ? ಮುತ್ತಿನಹಾರಗಳಿಂದ ಅಲಂಕೃತವಾದ, ಕೈಯಲ್ಲಿ ಹಿಡಿದಿರುವ ಬಿಲ್ಲು ಬಾಣಗಳ ಕಾಂತಿಯಿಂದೊಪ್ಪುವ, ಸೀತಾ ಸಮೇತನಾದ, ತ್ಯಾಗರಾಜನಿಂದ ಪೂಜಿಸಲ್ಪಡುವ ನಿನ್ನ ನೀಲಮೇಘ ಶ್ಯಾಮ ಶರೀರದ ದರ್ಶನವನ್ನು ಕೊಡಲು ನಡೆದೇ ಬರುತ್ತಿದ್ದೀಯ.

## ರಾಗ - ಮೋಹನ - ಆದಿತಾಳ (2 ಕಳೆ)

### ಪಲ್ಲವಿ

; ಗಾ,ಗದಪಗ ರೀಸಾ, ಸರಿ ಸರಿಗರಿಸಾ,ದ ದಾರಿಸಸದ । ದಪಾದಸರಿಗಾ । ಗರಿರಿಸ ಸರಿ ಸರಿಗಾ॥

- ನ.ನ್ನು. .ಪಾ . . ಲಿಂ. . . . . . .ಪ . . . . । . . ನಡಚಿವ । ಚ್ಚಿ.ತಿ. ವೋ. . . .॥

- ಗದಾಪದಪ ಗರೀಸಾ ಸರಿ ಸರಿಗಪಗರೀಸ ಸರೀಸ । ದಪಾದಸರಿಗಾ । ಗಾದಪ ಗಪಗರಿ ॥

- ನ .ನ್ನು. . ಪಾ. . ಲಿಂ. . . . . . . . ಪ . . । . . ನಡಚಿವ । ಚ್ಚಿತಿ. ವೋ . .॥

ಸರಿ - ಗದಾಪದಪಗರೀಸಾ ಸರಿಗರಿಗಪಗರಿಸಾ,ದ ಸರೀಸ । ದಪಾದಸರಿಗಾ । ಪಾ,ದಸಾ;ದಸದಪ ॥

. . - ನ .ನ್ನು ..ಪಾ. . ಲಿಂ . . . . . . . . ಪ . . । . . ನ ಡಚಿವ । ಚ್ಚಿ. ತಿ.ವೋ. . . ॥

ಗರಿಸರಿ - ಗಾ,ಪಾದಸಾ,ಸದಪಗದಪ । ಗರಿಗಾ,ಪಾದ । ಸಾರಿಸದಾಸದಪಾದಪ ಪಗದಪ ॥

. . . . ನಾ.ಪ್ರಾಣನಾ... ಥ. . . । . .ನಾ.ಪ್ರಾಣ । ನಾ. . . . . . . . . ಥ. . . ॥

ಗರಿಸರಿ - ಗಾ,ಪಾದ ಸರಿಗರಿಸದಪದರಿಸದಪ ಪಗದಪ । ಗರೀದಪಾರಿಸ । ಸರಿಸದಸದಪದಪಗದಪಗಪ ॥

. . . . ನಾ.ಪ್ರಾಣನಾ. . . . . . . . . . . ಥ. . . । . . . . . . . । .. . . . . . . . . . . . . . ॥

ಗರಿಸರಿ -

. . . . - ನನ್ನುಪಾಲಿಂಪ । ನೇಸಂಗತಿ.

### ಅನುಪಲ್ಲವಿ

;ಪಾಪಾದಪಪಗ ಪದಾಸಾಸದಸಾ; ।;ಪದದಪಗಾ ಪದಾ। ಸಾದಾಸಾರಿಸದಾಸದ॥

.ವ ನ . . . . ಜನಯುನ. . । .ವ.ನ . . ಜನ । ಯನ . . . . . . ॥

ಪಾದಪ - ಪದಸದಪಗಪದಾಸಾದಾಸರಿಸ ರಿಗಾ। ; ರಿಗಾಸಾ ಸಾದ । ರಿಸಸದದಪಗಪಗಪದಾ ॥

. . . ಪ. .ನ . .ಜನುಯ ನನೀ.ಮೋ. . । .ಮು.ನು ಜೂ. । ಚು. . ಟಿ. ಜೀ. . . . ॥

ದಪ -     ಗಗಾಗಗಾ ಗಪಗರಿ ಗಪದಸ । ;ದಾರಿಸದಾದಪಾ । ಪ ಗದಪ  ಗಪಗರಿ ॥

ವನಮನಿ ನೆ. ನ. ರು.ನ . । .ಮನ.  . ಸುಮ । ಮು೯ಮು ದೆಲಿಸಿ. ॥

ಸರಿ -     ಗಾಪದಸಾ ದಪಗರಿಸಾ ಸರಿಗರಿಗಪಗರಿಸಾ,ದಸರೀಸ  । ದಪಾ

. . -     ನ ನ್ನು. .  ಪಾ... .  ಲಿಂ. . . . . . . . ಪ . .  । . .  ನಡಚಿವಚ್ಚಿತಿವೋ॥

ಚರಣ

; ದಪಾದಗಾಪಾ;;ಗಪ । ಗರಿದಪಾಗರೀ । ಸಾಸದಸರಿ ಸ ರಿಗಾ ॥

ಸುರ ಪತಿ ನೀ. ಲ. । . .ಮಣಿ ನಿಭ । ತ ನು.ವು. ತೋ. .  ॥

;, ಗಪದ ಸಾ  ದಸದಪಗಪಗರಿ । ;ಸಸ ದಸರೀ । ಗಾ,ದ ಪದಾಪಗರೀ,ಸಾ ॥

ಯುರಮುನ  ಮು. . . ತ್ಯ.ಪು.। .ಸರು .ಲಚ । ಯ .  ಮು.  ತೋ .   ॥

ಅ ॥ ಪ ॥ ಯಂತೆ - ;, ಕರಮುನಶರಕೋ  । ;ದಂಡಕಾಂ । ತಿತೋ   ॥

ಧರಣಿತನಯತೋ । ತ್ಯಾ ಗ ರಾ । ಜಾರ್ಚಿತ ॥

---------

## ರಾಗ - ಸಾವೇರಿ - ಆದಿ - 2 ಕಳೆ

### ಸದಾಶಿವರಾಯರ ಕೃತಿ

ಆ ॥ ಸ ರಿ ಮ ಪ ದ ಸ ॥

ಶು. ಶು. ಶು.

ಅವ ॥ ಸ ನಿ ದ ಪ ಮ ಗ ರಿ ಸ ॥

ಕಾ. ಅಂ.

**ಪಲ್ಲವಿ**

ಶ್ರೀ ಕಾಮಕೋಟಿ ಪೀಠಸ್ಥಿತೇ

ಕರುಣಾ ಕಟಾಕ್ಷಿ ।

ಏಕಾಮ್ರಪತಿ ಹೃದಯ ನಿಲಯೇ

ನಮಾಮಿ ಶ್ರೀ ಕಾಮಾಕ್ಷಿ ॥ಶ್ರೀ॥

**ಅನುಪಲ್ಲವಿ**

ನಾಕಾಧೀಶವಿನುತೇ ಹಿಮಗಿರಿಸುತೇ ॥

ಶ್ರೀ ಕಾಂಚೀಪುರಾಧೀಶ್ವರಿ ವರದ ಸೋದರಿ ಶಂಕರಿ ॥ಶ್ರೀ॥

**ಚರಣ**

1. ಕದಂಬವನ ನಿಲಯೇ ಕಂಜಲೋಚನೇ

ಭವಾನಿ ।

ಮದಂಬವದನ ವಿಜಿತ ಶಶಿಬಿಂಬ

ವರಸುಗುಣ ಕದಂಬ ಲಲಿತಾಂಬ ॥ಶ್ರೀ॥

2. ಭಂಡ ಮಹಿಷದಾನಮದ ಭಂಜನೇ ನಿರಂಜನೇ

ಭಕ್ತಮಾನಸ -

ಮಂಡನಾಯಮಾನ ಸುಸ್ವಾಂತೇ ।

ಮೌನಿಮಾನಸಾಂಭೋಜ ಕಲಹಂಸೇ ॥ ॥ಶ್ರೀ॥

3. ಸದಾಶಿವ ಸಂಕಟಶಮನೇ ಸುರುಚಿರ

ಸೈಕತಶ್ರೋಣಿ ।

ಸದಾ ಸಮ್ಮೋದಿನಿ ನತಜನಾವನಿ ಲೋಕಜನನಿ

ನಿತ್ಯಕಲ್ಯಾಣಿ ॥ ॥ಶ್ರೀ॥

**ಸೂಚನೆ :** ಅನುಪಲ್ಲವಿಯ ಸಾಹಿತ್ಯ ಭಾಗದಲ್ಲಿ ನಾಗಾಧೀಶವಿನುತೇ ಎಂಬಂತೆ ಪಾಠವುಂಟು.

ಭಾವಾರ್ಥ

ಕಾಂಚೀನಗರದ ಕಾಮಕೋಟಿ ಪೀಠದಲ್ಲಿ ನೆಲಸಿರುವ ಏಕಾಮ್ರೇಶನ ಮಡದಿಯೂ ಕರುಣಾ ರಸವನ್ನು ಸೂಸುವ ನೇತ್ರ ಶೋಭೆಯಿಂದ ಬೆಳಗುವವಳೂ ಆದ ಕಾಮಾಕ್ಷಿದೇವಿಗೆ ವಂದನೆ. ಆಕೆಯು ದೇವೇಂದ್ರನ ಸ್ತುತಿಗೆ ಪಾತ್ರಳಾದವಳು. ದೇವತಾತ್ಮನಾದ ಹಿಮವಂತನ ಮಗಳು ಮತ್ತು ವರದರಾಜನೆಂಬ ಹೆಸರಿನಿಂದ ಕಾಂಚೀ ಕ್ಷೇತ್ರದಲ್ಲಿ ಬೆಳಗುತ್ತಿರುವ ಮಹಾ ವಿಷ್ಣುವಿನ ಸಹೋದರಿ. ಆಕೆಯ ವಿಹಾರ ಭೂಮಿ ಕದಂಬವನ. (ಈಚಲು ಮರಗಳ ತೋಟ). ಆಕೆಯದು ತಾವರೆಯ ನೇತ್ರ ಸೌಂದರ್ಯ. ಆಕೆಯ ಮುಖಕಾಂತಿ ಚಂದ್ರಬಿಂಬದ ಕಾಂತಿಯನ್ನು ಮೀರಿದ್ದು. ಆ ಮಹಾತಾಯಿ ಸಕಲ ಕಲ್ಯಾಣಗುಣ ಪರಿಪೂರ್ಣಳು.

ಶ್ರೀ ಕಾಮಾಕ್ಷಿ ಅಪಾರ ಶಕ್ತಿ ಸಂಪನ್ನಳಾಗಿ ಭಂಡಾಸುರ ಮಹಿಷಾಸುರಾದಿ ಪ್ರಬಲ ರಾಕ್ಷಸರನ್ನು ನಿಗ್ರಹಿಸಿದ ದೇವಿ. ನಿರ್ಲೇಪಳಾದ ಆಕೆ ಭಕ್ತರ ಹೃದಯಕ್ಕೆ ಭೂಷಣಪ್ರಾಯಳು ಮತ್ತು ಮುನಿಜನರ ಮನವೆಂಬ ಕಮಲದಲ್ಲಿ ವಿಹರಿಸುವ ಹಂಸ ಪಕ್ಷಿಯಂತೆ ರಾರಾಜಿಸುವ ದಿವ್ಯವಾದ ತೇಜೋಮಯ ಮೂರ್ತಿ.

ನಿತ್ಯಾನಂದದಿಂದ ನಲಿಯುವವಳೂ ಆಶ್ರಿತ ರಕ್ಷಕಳೂ, ಲೋಕಮಾತೆಯೂ, ಶುಭ ಸಂತತಿಯನ್ನು ಅನುಗ್ರಹಿಸುವವಳೂ ತನ್ನ ದೇಹ ಸೌಂದರ್ಯದಿಂದ ಪರಮೇಶ್ವರನ ಮನಸ್ಸನ್ನು ರಂಜಿಸುವವಳೂ ಆದ ತಾಯಿ ಕಾಮಾಕ್ಷಿದೇವಿಗೆ ಭಕ್ತಿ ಪೂರ್ವಕವಾದ ನಮನಗಳು.

--------

## ರಾಗ - ಸಾವೇರಿ - ಆದಿ (2 ಕಳೆ)

### ಪಲ್ಲವಿ

1. ದಪಮಾ ಪದಸ ಸನಿದಾ ಪಮ ಪಾದನಿಪಾದಮ ಗಾರಿ । ಸಾ ; ; ಸರಿ ।

ಶ್ರೀ . . ಕಾಮ ಕೋ . . ಟಿ ಪೀ . . . . . ಠ ಸ್ಥಿ । ತೇ . ಕ ರು ।

ಮಾಪದಪಮಪದ ॥

ಣಾ. ಕಟಾ . .ಕ್ಷಿ ॥

2. ದಪಮಾ ಪದಪದರಿಸ ಸನಿದಾ ಪಮ ಪದನಿದನಿದಪಮ ಗಾರಿ । ಸಾ ; ; ಸರಿ।

ಶ್ರೀ . . ಕಾ . . ಮ. ಕೋ. . ಟಿ ಪೀ . . . . . ಠ ಸ್ಥಿ । ತೇ . ಕರು ।

ಮಾಪದಪಮಪದ ॥

ಣಾ . ಕಟಾ. . ಕ್ಷಿ ॥

ಪಾದಮ ಪಾದನಿ ಪಾದಮ ಗಾರಿಸರಿ ಸಸರಿಮಪ। ದಾ ; ದರೀಸ ।

ಏ . . ಕಾ . . . . . . ಮೃಪತಿ ಹೃದಯನಿಲ। ಯೇ . ನಮಾಮಿ।

ಸನಿದಾ ಪದನಿದಪಮ ದಪದ ॥ ಸಾ .......॥

ಶ್ರೀ. . ಕಾ . . . ಮಾ.. ॥ ಕ್ಷಿ .......॥

### ಅನುಪಲ್ಲವಿ

ಸಾನಿದಪದ ಪಾದನಿಪಾದಮ ಗರಿಸರಿಮಪ । ದಾ ; ; , ದ ।

ನಾ .ಕಾ. . ಧೀ . . . . . ಶವಿನು । ತೇ . . ಹಿ ।

ಪಮಪದಸಾ ಪದ ॥

ಮಗಿರಿಸುತೇ ಅಂಬ ॥

2. ಸಾ ನಿದಪದ ಪದರಿಸನಿದಪಮ ದದಪಮಗರಿಸರಿ ಮಪ । ದಾ ; ; , ದ ।

ನಾ . ಕಾ. . ಧೀ . . . . . . . . . ಶ. ವಿನು । ತೇ . . ಹಿ ।

ಪಮಪದಸಾ ; ॥

ಮಗಿರಿ ಸುತೇ. ॥

ದಪದಸೋ ಸರಿಗೊರೀ ರಿಗಸೋ ಸನಿದಾ ಪದ । ಸಾ; ದರಿಸದ । ೯ ೯

ಶ್ರೀ.. ಕಾಂ ಚೀ . . ಪು.ರಾ.ಧೀ . . ಶ್ವ । ರಿ.. ವರದಸೋ। . .

ರಿಸಮಾ ಪದ ॥

ದರಿಶಂ ಕರಿ ॥ ॥ಶ್ರೀ ಕಾಮಕೋಟಿ॥

**ಚರಣ**

ದಪಾ ಪಪಮಗರೀ ಮಪದಾ ; ಪಾದನಿಪಾದಮ । ಪಾದ

ಕ ದಂ ಬ .ವ .ನ ನಿಲಯೇ ಅಂ . ಬ . । ಕಂ ಜ

ಸನಿದಾ ಮದ । ಸಾ ದರಿಸನಿದಾ ನಿದಪಮ ॥

ಲೋ . . ಚ । ನೇ. ಭ.ವಾ. ನಿ . ॥

ದಗಾರಿ ಗರಿಸ ಸರಿಸನಿದಾ ಮದ ಸಾಸ । ದಪ ದರಿಸನಿದಾ ೯ಸನಿಪಾ ॥

ಮದಂಬ ವದನ ವಿ.ಜಿ.ತ ಶಶಿ ಬಿಂ.ಬ । ವರ ಸು.ಗು.ಣ ಕ. ದಂ ॥

ದಪ ಪಾದಮ ದದಪದ॥

ಬ ಲ ಲಿ . ತಾಂ .ಬ ॥ ॥ಶ್ರೀ ಕಾಮಕೋಟಿ॥

**ಕಡೇ ಚರಣ**

, ಪದನಿ ದಮಗರಿ ಗರಿಸಾ ಸರಿಮಪ । ದಾ ; ದಪದಸ ।

ಸದಾ. . . . . ಶಿವಸಂ ಕಟಶಮ । ನೇ . ಸುರುಚಿರ ।

ಸನಿದಾ ಪದಸಾಸಾ ॥

ಸೈ .. ಕತಶ್ರೋಣಿ ॥

ದಗಾರೀ ಗ ರಿ ಸ ಸ ಸರಿಸನಿದಾ ಪದಸಸ । ದರಿಸನಿಪದಾನಿ ॥

ಸದಾಸ ಮ್ಮೋ.ದಿ ನಿ ನ .ತ.ಜ ನಾ.ವನಿ । ಲೋಕಜನನಿನಿ ॥

ದಪ ಪಾದಮ ದದಪದ ॥

. ತ್ಯ ಕ . . ಲ್ಯಾ. ಣಿ ॥ ॥ಶ್ರೀ ಕಾಮಕೋಟಿ॥

ರಾಗ - ಮಾಯಾಮಾಳವ ಗೌಳ - ಆದಿ - (2 ಕಳೆ) ತಾಳ
ವಾಸುದೇವಾಚಾರ್ಯರ ಕೃತಿ

ಆ ॥ ಸ ರಿ ಗ ಮ ಪ ದ ನಿ ಸ ॥

ಶು. ಅಂ. ಶು. ಶು. ಕಾ.

ಅವ ॥ ಸ ನಿ ದ ಪ ಮ ಗ ರಿ ಸ ॥

**ಪಲ್ಲವಿ**

ಕಲಿನರುಲಕುನೀ ಮಹಿಮದೆಲುಸುನ ।

ಕಮಲ ನಯನ ವಾಸುದೇವ ಮಹಾನುಭಾವ ॥ಕಲಿ॥

**ಅನುಪಲ್ಲವಿ**

ಜಲಧಿಶಯನ ಜಗಜ್ಜನ್ಮಾದಿ ಕಾರಣ ।

ಜಲಜ ಸಂಭವ ಭವೇಂದ್ರಾದಿ ವಂದಿತ ಚರಣ ॥ಕಲಿ॥

**ಚರಣ**

ಸುಲಲಿತ ಮಗು ನೀ ಚರಣಮು ಸೋಕಗ ।

ಶಿಲಯೈಯಹಲ್ಯಯೈ ವೆಲಯಲೇದಮುನು ।

ಬಲಿನಿ ಪ್ರಹ್ಲಾದುನಿ ಧ್ರುವುನಿಪಾಂಚಾಲಿನಿ ।

ಸಲುಪಲೇದೇಮಯ್ಯ ಹಲಧರ ಸೋದರ ॥ ॥ಕಲಿ॥

**ಭಾವಾರ್ಥ**

ಹೇ ವಾಸುದೇವ ನೀನು ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಕಾರಣನಾಗಿರುವೆ. ನಿನ್ನ ಮಹಿಮೆ ಅಪಾರ. ಬ್ರಹ್ಮ ರುದ್ರಾದಿಗಳಿಗೆ ಪೂಜ್ಯನಾಗಿರುವೆ. ನಿನ್ನ ಚರಣ ಸ್ಪರ್ಶದಿಂದ ಕಲ್ಲಾಗಿ ಬಿದ್ದಿದ್ದ ಅಹಲ್ಯೆ ತನ್ನ ಪೂರ್ವ ರೂಪವನ್ನು ಪಡೆದಳು. ಆರ್ತರಾಗಿ ನಿನ್ನಬಳಿ ಮೊರೆ ಹೊಕ್ಕ ಬಲಿ ಚಕ್ರವರ್ತಿಯನ್ನೂ ಬಾಲಕರಾದ ಪ್ರಹ್ಲಾದನನ್ನೂ ಮತ್ತು ಧೃವನನ್ನೂ, ಕೌರವನಿಂದ ಅವಮಾನಿತಳಾದ ದ್ರೌಪದಿಯನ್ನೂ ಪೊರೆದು ಅವರಿಗೆ ಚಿತ್ತಶಾಂತಿಯನ್ನು ಕರುಣಿಸಿದೆ. ಇವು ಎಣಿಕೆಗೆ ಮೀರಿದ ನಿನ್ನ ಮಹಿಮೆಗಳಲ್ಲಿ ಕೆಲವು. ಇಂತಹ ನಿನ್ನ ಮಹಿಮೆಗಳು ಗಣನಾತೀತ. ಅವುಗಳ ರಹಸ್ಯವನ್ನು ತಿಳಿಯಲು ಅನೇಕ ಕಾಲದ ತಪಸ್ಸನ್ನು ಮಾಡಿದವರಿಗೆ ಮಾತ್ರ ಸಾಧ್ಯ. ಕಲಿಯ ಪ್ರಭಾವಕ್ಕೆ ವಶರಾಗಿ ತೊಳಲಾಡುವ ಜನರಿಗೆ ಹೇಗೆ ತಾನೆ ನಿನ್ನ ಅಪರಿಮಿತವಾದ ಶಕ್ತಿ ಸಾಮರ್ಥ್ಯಗಳು ಅರಿವಾದಾವು ?

## ರಾಗ - ಮಾಯಾಮಾಳವಗೌಳ - ಆದಿತಾಳ (2 ಕಳೆ)

### ಪಲ್ಲವಿ

1. ೯೯೯ಪ । ದಪಮಾ । ಗಾ ಮಾ೯ದ । ಮಗರೀ೯ ಸಾ । ೯೯೯ ಸಾ । ಮಗಮಾ ಪಾ ।
   ...ಕ । ಲಿನ ರು । ಲ ಕು . . । . . . ನೀ೯ । . . ಮ । ಹಿ . ಮ ದೆ ।
   ಪಾ ಪಮನಿದ । ಪಾ೯ ೯ ॥
   ಲು ಸು . . । ನ . . ॥

2. ಪಮಗಮಾಗ ಮ । ಪ ಪದನಿದಪಮ। ಗಾ ಗಮಪದ । ಮದಪಮ
   ಈ . . . . ಕ । ಲಿ ನ .. ರು. . । ಲ ಕು . . । . . . .
   ಗ ಮ ಪ ಮ । ಗರಿ ಗರಿಸನಿ ಸಮ । ಮಗಮಾ ಪಾ । ಪಾ ಪಮನಿದ। ದಪಪಾ೯೯ ॥
   ನೀ೯ . . . । . . . . .. ಮ. । ಹಿ. ಮ ದೆ । ಲು ಸು. . .। ನ . . . . ॥

3. ಪಮಗಮಾಗ ಮ । ದಪಮಾ । ಗಮಪದ ನಿಸರಿಸ । ನಿದಪಮ ಗಮಪಮ ।
   ಈ . . . ಕ । ಲಿ ನರು । ಲ. . . ಕು . . । . . . . . ನೀ೯ . . . ।
   ಗರಿ ಗರಿಸನಿ ಸಮ । ಮಗಮಾ ಪಾ । ಪಾ ಪಮನಿದ । ದಪಪಾ ೯೯ ॥
   . . . . ಮ . । ಹಿ. ಮ ದೆ । ಲು ಸು . . . । ನ. . . . . ॥

4. ಪಮಗಮಾಗ ಮ । ಪ ಪದನಿ ದಪಮ । ಗಮಪದ ನಿಸರಿಗ । ರಿಸನಿದ ನಿದಪಮ।
   ಈ . . . ಕ । ಲಿ ನ .. ರು. . । ಲ. . . ಕು... । . . . ನೀ೯ ... ।
   ಗರಿ ಗರಿಸನಿ ಸಮ । ಮಗಮಾ ಪಾ । ಪಾ ಮಾನಿದ । ದಪಪಾ ೯೯ ॥
   .. . . . ಮ. । ಹಿ . ಮ ದೆ । ಲು ಸು . . । ನ . .. .. ॥

1. ೯೯೯ ದಪ । ಮಗಮಾ ಪಾ । ದಪದಾ । ಸನಿದನಿ ಸಾ । ೯೯ ದನಿಸಾರಿಸ।

. . ಕ . । ಮ .ಲ ನ । ಯ.ನ । ವಾ. .. ಸು । . . ದೇ ... ।

ಸನಿದಾ ಪಾ। ಪದನಿದ ದಪಪಮ । ಗಮಗರಿ ಸರಿಗರಿ ॥

....ವ ಮ । ಹಾ. .. ... ನು .। ಭಾ... .... ॥

2. ಗಾ೯ ದಪ । ಮಗಮಾ ಪಾ । ಮಪದಪ ದಾ । ಸನಿದನಿ ಸಾ । ೯೯ ದನಿಸಾರಿಸ ॥

ವ . ಕ. । ಮ . ಲ ನ । ಯ . . ನ । ವಾ.. . ಸು । . .ದೇ . . . ॥

ಸನಿದಾ ಪಾ೯ದ । ನಿಸನಿ ದಪಮ ಗಮ । ಗ ರಿಸನಿ ಸರಿಗಮ ॥

. .ವ ಮ. . । ಹಾ.. . . ನು. । . . ಭಾ . . ॥

ಪದಪಮಗಮ

ವ ... ....  ॥ಕಲಿನರುಲಕು॥

## ಅನುಪಲ್ಲವಿ

1. ೯೯೯ ದ । ಪದ ನೀ । ಸಾ ಸನಿಸಾರಿಸ । ನಿದ ನಿಸಾ । ೯೯೯ ಸ । ೯ ಸಾಸ ।

... ಜ । ಲಧಿ ಶ । ಯ ನ . . . । . . ಜಗ । . . ಜ್ಜ । . ನ್ನಾದ್ರಿ।

ಸನಿರಿಸಸನಿ ದನಿ । ೯ ದ ನಿಸಾ ॥

ಕಾ . . . । . ... ರಣ ॥

2. ೯೯೯ ದ । ಪದ ನೀ । ಸಾ ಸನಿ ಸಾರಿಸ । ನಿದ ನಿಸಾ । ೯೯೯ ಸ । ೯ ಸಾಸ ।

. . ಜ । ಲಧಿ ಶ । ಯ ನ . . . । . . ಜಗ । ... ಜ್ಜ । . ನ್ನಾದ್ರಿ ।

ಸನಿಸರಿಸನಿ ದನಿ । ನಿದನೀ ಸನಿರಿಸ ॥

ಕಾ. . . . । . . ರ ಣ. . .॥

3. ನಿದ ನಿದಪಮ ದ । ಪದ ನೀ । ಸಾ ಸನಿ ಸಾರಿಸ। ನಿದ ನಿಸಾ ।

. . . . . . ಜ । ಲಧಿ ಶ । ಯ ನ . . . । . . . ಜಗ ।

ೞ ನಿಸನಿದ । ಪಮ ಗಮಗರಿಸನಿ । ಸರಿಗಮ ಪದನಿಸ । ಗಮಪದ ನಿಸರಿಸ ॥

.. ಜ್ಜ . . । . . ನ್ಮಾ .. .ದಿ. । ಕಾ ... . . . । ರ. . . ಣ ... ॥

4. ನಿದ ನಿದಪಮ ದ । ಪದ ನೀ । ಸಾ ಸನಿ ಸಾರಿಸ । ನಿದ ನಿಸಾ ।

. . . . .. . ಜ । ಲಧಿ ಶ । ಯ ನ . . . । . . ಜಗ ।

ೞ ೯ ರಿ । ೯ ರೀ ರಿ । ಸರಿಗರಿ ರಿಸನಿದ । ೯ ನಿ ಸಾ ॥

. . ಜ್ಜ । ನ್ಮಾ ದಿ । ಕಾ. . . . . । . ರ ಣ ॥

1. ೞ೯ ನಿ । ಸರಿ ಸಾ । ನೀಸರಿ ಸನಿದಾ । ೯ ನಿಸಾ । ೞ ಸನಿಸರಿ । ಸನಿದಾ ಪಾ ।

..ಜ । ಲಜ ಸಂ । ಭ..ವ.. । .ಭವೇಂ । ..ದ್ರಾ. । . . ದಿ ವಂ ।

ಪದನಿದ ದಪಪಮ । ಗಮಗರಿ ಸರಿಗರಿ ।

ದಿ... ತ... । ಚ... ರ.. ।

ಗಾ೯ ನಿ । ಸರಿಸಾ । ನೀಸರಿ ಸರಿ ಸನಿದಾ । ೯ ನಿಸಾ । ೞ ಸನಿ ಸಾರಿಸ ।

ಣ. ಜ । ಲಜ ಸಂ । ಭ . . . . ವ. . । .ಭವೇಂ । .. ದ್ರಾ. .. . ।

ನಿದ ಪಾ । ಪದನಿದ ದಪಪಮ । ಗಮಪದ ನಿಸನಿದ ॥

.ದಿ ವಂ । ದಿ. . . ತ . . . । ಚ . . . ರ ... ।

ಪಮಗರಿಗಮ

ಣ . . . . ॥ಕಲಿನರುಲಕು॥

ಚರಣ

ೀೀಮ । ಮಮಮಾ । ಮಾಮಾ । ಗಾಮಪ ಮಾೀಪ ಮಗಾೀ ।

...ಸು । ಲ ಲಿ ತ । ಮಗು । ನೀ .... ... ।

ೀೀ ಮಗ । ಮಪ ಗಮಗ ರಿಸನ್ಹಿ । ಸರಿ ಸರಿಗಾ । ೀರಿಗಾ ॥

... ಚ . । ರ . ಣ .. ಮು.. । ಸೋ.... । .ಕಗ ॥

ೀೀ ಮ । ದಪಮಾ । ಗಾಮಪ ಮಗರೀ । ಪಮಗರಿ ಸಾ । ೀೀ ಸಮ ।

..ಶಿ । ಲಯ್ಯೆಯ । ಹ.. .... । ಲ್ಯ . . ಯ್ಯೆ । . . .ವೆ. ।

ಮಗಮಾ ಪಾ । ಪಾ ಮಾೀಪ । ದದಪಾ ॥

ಲ. .ಯ ಲೇ । ದ . . । ಮುನು ॥

,,, ಬಲಿನಿ ಪ್ರಹ್ಲಾದುನಿ । ಧ್ರುವುನಿ ಪಾಂಚಾಲಿನಿ ।

ಸಲುಪಲೇದೇಮಯ್ಯ । ಹಲಧರ ಸೋದರ ॥

॥ಕಲಿನರುಲಕು॥

## ರಾಗ - ಕಾಂಬೋದಿ - ಆದಿ ತಾಳ (2 ಕಳೆ)

## ತ್ಯಾಗರಾಜರ ಕೃತಿ

ಆ ॥ ಸ ರಿ ಗ ಮ ಪ ದ ಸ ॥
ಚ. ಅಂ. ಶು. ಚ.

ಅವ ॥ ಸ ನಿ ದ ಪ ಮ ಗ ರಿ ಸ ॥
ಕೈ

### ಪಲ್ಲವಿ

ಎವರಿಮಾಟವಿನ್ನಾವೋ ರಾವೋ
ಇಂದುಲೇವೋ ಭಳಿ ಭಳಿ ॥ಎವರಿ॥

### ಅನುಪಲ್ಲವಿ

ಅವನಿಲೋ ನಾರ್ಷೇಯ ಪೌರುಷೇಯ ।
ಮಂದಿ ಚೋದ್ಯಮೆರುಗಲೇನಯ್ಯ ॥ಎವರಿ॥

### ಚರಣ

ಭಕ್ತ ಪರಾಧೀನು ಡನುಚು ಪರಮ
ಭಾಗವತುಲ ಸೇವಿಂಚಿ
ವ್ಯಕ್ತರೂಪುಡೈ ಪಲಿಕಿನ ಮುಚ್ಚಟ
ಯುಕ್ತ ಮನುಚುಯುಂಟಿ
ಶಕ್ತಿಗಲ ಮಹಾದೇವುಡು ನೀವನಿ
ಸಂತೋಷಮುನನುಂಟಿ.
ಸತ್ತಚಿತ್ತು ಡಗು ತ್ಯಾಗರಾಜನುತ
ಸತ್ಯಸಂಧುಡನು ಕೊಂಟಿ ಇಲಲೋ ॥ ॥ಎವರಿ॥

### ಭಾವಾರ್ಥ

ಶ್ರೀರಾಮ, ನೀನು ಯಾರ ಮಾತನ್ನು ಕೇಳಿ ನನ್ನ ಬಳಿ ಬಾರದಿರುವೆ ? ನೀನು ಸರ್ವಜ್ಞನೂ ಸರ್ವವ್ಯಾಪಿಯೂ ಆರ್ಷ ಸಂಪ್ರದಾಯ ಲೋಕಮರ್ಯಾದೆಗಳನ್ನು ಬಲ್ಲವನೂ ಆಗಿರುವೆ. ಆದರೂ ನಿನ್ನ ವರ್ತನೆ ಆಶ್ಚರ್ಯಕರವಾಗಿದೆ. ನೀನು ಭಕ್ತರಿಗೆ ವಶನಾಗುವವನೆಂಬುದಾಗಿ ನೀನೇ ಹೇಳಿರುವುದು ಸತ್ಯವೆಂದು ಭಾವಿಸಿದೆ. ನೀನು ಮಹಾ ಶಕ್ತಿವಂತನಾದ ದೇವನೆಂಬುದಾಗಿ ತಿಳಿದು ಸಂತೋಷದಿಂದ ಮೆರೆದೆ. ನೀನು ಸ್ಥಿರ ಚಿತ್ತನೂ ಸತ್ಯ ಸಂಧನೂ ಆಗಿರುವೆಯೆಂದು ನಂಬಿಕೊಂಡಿದ್ದೆ. ಆದರೆ ನನ್ನ ಭಾವನೆಗಳನ್ನೆಲ್ಲಾ ಸುಳ್ಳಾಗಿಸಿ ನೀನು ನನ್ನ ಕಣ್ಣಿಗೆ ಕಾಣಿಸದೆ ಮರೆಯಾಗಿರುವೆ. ಇದರ ರಹಸ್ಯವೇನೆಂಬುದು ಅರಿವಾಗುತ್ತಿಲ್ಲ.

## ರಾಗ - ಕಾಂಬೋದಿ - ಆದಿತಾಳ (2 ಕಳೆ)

### ಪಲ್ಲವಿ

1. ; ಪ ಮಾ ಗ ಮಾ ಪಾ ಪಾ ; ದ ಪ ।

ಎ ವ ರಿ ಮಾ . . ಟ ವಿ . ।

ದಾ ; ನಿನಿದಪ ಮಮಪಪ ದನಿದದ ॥

ನ್ನಾ ವೋ. . ರಾ. . . . .ವೋ ॥

2. ಪಮ ಪಮಾಗ ಮಾಪಮ ಪಾ; ದಪ ।

. . ಎ ವ ರಿ ಮಾ . . ಟ ವಿ . ।

ದಾ ; ನಿನಿದಪ । ಮಗಮಪ ಪಮಪದ ಪದಸಾ ಸನಿನಿದ ॥

ನ್ನಾ ವೋ .. । ರಾ . . . . . ವೋ . ॥

3. ದಪಪಮ ಪಮಾಗ ಮಾಪಮ ಪಾ; ನಿದದಪ ।

. . . . ಎ ವ ರಿ ಮಾ . . ಟ ವಿ . . . ।

ದಾ ; ದಾನಿದ ದಪ । ಮಪದರಿ ಸಾನಿದ ॥

ನ್ನಾ ವೋ . . . । ರಾ. . . . ವೋ ॥

4. ಪಮ ಪದನಿದ ಪಮಮಾ ಗಮಪಾ, ಮಪದಾ ಪಾ, ದಸಾ ।

. . ಎ . . . ವ . . . ರಿ ಮಾ . ಟ. . . ವಿ . . . ।

ದಸರಿಗ ಮಗ ರಿಗಮಗ । ಗರಿಸಾ ದರಿ ರಿಸನೀ ದಪ॥

ನ್ನಾ. . . . . ವೋ. . । ...ರಾ . . .... ವೋ ॥

5. ಪಮ x ಪಸನಿ ನಿದಪಮಗ ಮಪಾ, ಮಪದಾ ಪಾ, ದಸಾ ।

ವೋ. x ಎ . . ವ . . ರಿ. ಮಾ . ಟ. . . ವಿ . . . ।

ದಸರಿಗ ಮಗ ರಿಗಮಗ । ಗರಿಸಾ ದರಿ ರಿಸನೀ ದಪ ॥

ನ್ನಾ. . . . . ವೋ. . । .. .. ರಾ. ... ವೋ.॥

1. ಪಮ X ನಿದನಿಪ ಪಮಗಾ ಪಮಗರಿ ಗರಿಸಾ ಸಪದಾ ।

. . X ಇಂ.ದು. ಲೇ . . . . . . . . . . . .... ।

ಸಾ ; ; ಸರಿ । ಗಮ ಪದರಿಸನೀ ದಪಾ॥

ವೋ. . . . .। . . ಭ . ಳಿ . ಭಳಿ ॥

2. ಮಮ ಪನಿದಾ ದನಿಪಾ ಪಾದಪ ಮಗ ಪಮಗರಿ ಗರಿಸಾ ಸಪದಾ ।

. . ಇಂ. . ದು ಲೇ . . . . . . . . . .. . . .. . ।

ಸಾ ಸರಿಗಮ ಪದ । ಸಾ ಪದರಿಸನೀ ದಪಾ ॥

ವೋ. . . . . . । . ಭ . ಳಿ .. ಭಳಿ ॥

3. ಪಮ ಪನಿದಾ ದನಿಪಾ ಪಾದಪ ಮಗ ಪಮಗರಿ ಗರಿಸಾ ಸಪದಾ ।

. . ಇಂ. . ದು ... ಲೇ. . ... . . . . . . .. . . .. . ।

ಸಾ ಸರಿಗ ಮಪದ ಸರಿಗಮಗರಿ । ಸಾ ಪದ ಸರಿಗರಿ ಸನಿದಪಾ ॥ ಮಮ

ವೋ . . . . . . . . . . . । . .ಭ . ಳಿ . . . ಭಳಿ ॥ ಎವರಿಮಾಟ॥

ಅನುಪಲ್ಲವಿ

1. ; ಸಪಾದಸಾ; ರೀ ; ಸಾ,ರಿ । ಗಾಮಗಗರಿಸಾ । ; ಸದರಿಸ ನಿದದಪ ॥

.. ಅವನಿಲೋ . . ನಾ . । . ರ್ಷೇ...ಯ । ಪೌ. . . ರುಷೇ॥

2. ದಾ X ಸಪಾದಸಾ ; ದಾ, ಸರೀ ಸಾ, ರಿ । ಗಾ ಸರಿಗರಿ ರಿಗಮಗರಿಸೇ । ; ದಾಸರೀಸ ನಿದದಪ ॥

ಯ X ಅವನಿಲೋ . . . . . ನಾ . . । . ರ್ಷೇ.. . . . ಯ । . ಪೌ. . .. ..ರುಷೇ ॥

3. ದಾ X ಸಪಾದಸಾ ; ದಾ,ಸರೀ ಸಾರಿ ।ಗಾ ರಿಪಮಗ ರಿಮಗರಿ ಸಾ । ; ದಸರೀಗರಿ ಸನಿದಾ ದಪ ॥

ಯ X ಅವನಿಲೋ . . . . ನಾ. . ।. ರ್ಷೇ. . . . . . ಯ । ಪೌ. . . . . . . ರು ಷೇ ॥

ದಾ X ಸರಿಗಾಮಗ ರೀಗರಿ ಸಾ ಸನಿದಾ ದನಿಪಾ ಪಮಗಾ । ಪಾ, ದಸಾ ; ದನಿ । ದದಪಮ ಗಮಪದ

ಯ X ಮಂ. . . . . . ದಿ ಚೋ . . . ದ್ಯ . . . । ಮೇ . . ರು । ಗ.ಲೇ. ನ . . .

ಸನಿನಿದ ॥ ದಪಪಮ

ಯ್ಯ ....॥ . . . ॥

॥ಎವರಿಮಾಟ ಕಡೇ ಸಂಗತಿ ॥

ಚರಣ

1. ; , ದನಿದದ ಪದಾ ; ದಪ ಪದನಿದ ।

ಭ.ಕ್ತ ಪ . ರಾ ಧೀ. . . . . ।

ನೀ, ನಿದನಿಪಾ । ; ; ದಸನಿದ ಪಾ ।।

.. ನುಡನುಚು । . . ಪ. ರ. ಮ ।।

2. ಪನಿದಾಮ - ಪದಸಾ, ಸಾನಿನಿದಪ ದಾ; ದಾರಿಸ ಸದದನಿ ।

. . . . - ಭ. . . ಕ್ತ . . ಪ. ರಾ ಧೀ. . . . . . ।

ನಿದದಾ, ನಿ ದನಿಪಾ । ; ; ಪದಾಪ ರಿಸನಿದ ।।

. . . ನುಡನುಚು । . . . . . ಪ .ರ. ।।

3. ಪಾ X ಮಪ ಮನಿದಾ ಪದಪದ ಮಾ ; ಗಮ ।

ಮ X ಭಾ. . . ಗ ವ . . . ತು ಲ . ।

ಪದ ಪಾ, ದ ಸಾ, ದ ದಾ, ನಿ । ನಿದದಾ ದನಿಪಾ ; ।।

. . ಸೇ. . . . ವಿಂ . । . . . ಚಿ . . . ।।

; ಪಮಗಾ ಪಾ, ದ ಸಾಸಾ, ರಿಗರೀ ಸೇರಿ ಸನಿದಾ ದಪಾದ ।

ವ್ಯ . . ಕ್ತ . ರೂ . . . . . ಪು . . ಡೈ . . ।

ಸಾ,ಸನಿದಾ ನಿಪಾ । ನಿದದಪ ಮಾ ಗಾ ।।

. ಪ .ಲಿ ಕಿನ । ಮು .. ಚ್ಚ ಟ ।।

; ರಿಗ ರಿಗಮಗಾಮ ಗರಿಸಾ ರಿಗ ರಿಗಮಗ ಮಾ, ಗಮ ।

ಯು. . .. . . .ಕ್ತ . . . . . . . . . ಮ ।

ಪಾ, ದ ಪಮಗಾ ಪಮಗರಿ ಗರಿಸಾ । ಸನಿಪಾ ದಾಸಾ ; ।।

ನು . . ಚು . . ಯುಂ . . . . . । . . . . ಟೆ . ।।

; ದಸನಿದಪಾ ನಿದದಪ ಮಗಮಾ । ; , ಪಮಗಮ ಪದಾ । ದಪಾ, ದ ಸಾ, ದ ದಾಸನಿ ನಿದದಾ ॥

ಶ . ಕ್ತಿಗಲ ಮ ... ಹಾ. . . . . ದೇ . . ..ವುಡು ನೀ . . . . . ವ . . ನಿ . . ॥

; ಪದರಿಸನೀ ದಪಾ ದಾನಿದ ಪಾದಪ ಮಗಮಾ ।

ಶ. . .ಕ್ತಿ ಗಲ ಮ . . . . . ಹಾ. . . ।

; , ಪಮಗಮ ಪದಾ । ದಪಾ, ದ ಸಾ, ದ ದಾಸನಿನಿದದಾ ॥

ದೇ. . .. ವುಡು ನೀ . . . . . ವ . . . ನಿ॥

; ದನಿದ ಪದಪ ಪಮ ದಪಮಗ ಪಾದಾ ।

ಸಂ. . ತೋ. ಷ. ಮು. . . ನ. . ।

; ಸಾರಿಗ ರಿಸಸಾ ಸನಿಪಾ । ದಾ ಸಾ ; ; ।

ನುಂ . . . . . . . . . . ಟಿ ।

; ಪದಸಾ ಪದಸರಿಗಾ ರೀಗಮಗಾ,ಮ ಗರಿಸಾ।

ಸ .ತ್ತ ಚಿ. . .ತ್ತು ಡ . . . . ಗು .. ।

ಸಾರಿಗ ರಿಸಾನಿ ನಿದದಾ ಪಾದಸ । ದಪಾಮ ಮಗಗಾ ಪಾದಾ ॥

ತ್ಯಾ.. . . . ಗ . . ರಾ. . . . . ಜ .. ನುತ ॥

; ಸರಿಗರಿ ರಿಗರಿಮ ಗರಿಸಾ ಸರಿನೀ ದಾ ಪಾ, ದ ।

ಸ.ತ್ಯ. ಸಂ. . . ಧು ಡ . . ನು ಕೊಂ . ।

ಪಮಗಾ ಪಾ,ದ ಸಾ ದನಿ । ನಿದಾಪ ದಪಾಮ ಗಮಪದ

. . . . ಟಿ . . ಇ . . . ಲ . . ಲೋ. .

ಸನಿನಿದ ॥ ದಪಪಮ

. . . . . . . .

॥ಎವರಿಮಾಟ॥

## ರಾಗ - ಶ್ರೀ- ತಾಳ - ಆದಿ - (2 ಕಳೆ)
## ತ್ಯಾಗರಾಜರ ಕೃತಿ

ಆ ॥ ಸ ರಿ ಮ ಪ ನಿ ಸ ॥
ಚ. ಶು. ಕೈ.

ಅವ ॥ ಸ ನಿ ಪ ಮ ರಿ ಗ ರಿ ಸ ॥
ಸಾ

### ಪಲ್ಲವಿ

ನಾಮ ಕುಸುಮ ಮುಲಚೆ ಪೂಜಿಂಚೆ

ನರಜನ್ಮಮೇ ಜನ್ಮಮು ಮನಸಾ ॥ನಾಮ॥

### ಅನುಪಲ್ಲವಿ

ಶ್ರೀ ಮನ್ಮಾನಸ ಕನಕ ಪೀಠಮುನ

ಚಲಗ ಜೇಸಿಕೊನಿವರಶಿವರಾಮ ॥ನಾಮ॥

### ಚರಣ

ನಾದಸ್ವರಮುನು ವರನವರತ್ನಪು

ವೇದಿಕಪೈ ಸಕಲ ಲೀಲಾ ವಿ-

ನೋದುನಿ ಪರಮಾತ್ಮುನಿ ಶ್ರೀರಾಮುನಿ

ಪಾದಮುಲನು ತ್ಯಾಗರಾಜ ಹೃದ್ಭೂಷಣುನಿ ॥ ॥ನಾಮ॥

### ಭಾವಾರ್ಥ

ಇಲ್ಲಿ ತ್ಯಾಗರಾಜರು ಅತ್ಯಂತ ಸುಲಭವೂ ಶ್ರೇಷ್ಠವೂ ಆದ ಮಾನಸ ಪೂಜಾ ವಿಧಾನವನ್ನು ವಿವರಿಸುತ್ತಿದ್ದಾರೆ. ಈ ವಿಧಾನದಲ್ಲಿ ಪೂಜಾ ಪರಿಕರಗಳನ್ನು ಒದಗಿಸಿಕೊಳ್ಳಬೇಕಾದ ಅಗತ್ಯವಿಲ್ಲ. ಪುಷ್ಪ, ಅಕ್ಷತೆ, ಧೂಪ, ದೀಪ, ನೈವೇದ್ಯಗಳ ಪ್ರಸಕ್ತಿಯಿಲ್ಲ. ಯಾವ ಬಗೆಯಾದ ಕಾಯಕ್ಲೇಶವಾಗಲಿ ಅರ್ಥವ್ಯಯವಾಗಲಿ ಇರದು. ಸಂಪದ್ಭರಿತವಾದ ಮನಸ್ಸೇ ಪ್ರಕಾಶಮಾನವಾದ ಸುವರ್ಣ ಪೀಠ. ಮನಸ್ಸಿನಿಂದ ಹೊರಹೊಮ್ಮುವ ವಿವಿಧ ಸ್ವರ ವಿಕಾಸಗಳ ನವರತ್ನಗಳ ಕಾಂತಿಯೇ ಭದ್ರಾಸನ. ಈ ಭದ್ರಾಸನದಲ್ಲಿ ಲೀಲಾಮಾನುಷ ವಿಗ್ರಹನೂ ತ್ಯಾಗರಾಜನ ಹೃದಯದಲ್ಲಿ ವಿರಾಜಿಸುವವನೂ ಆದ ಶ್ರೀರಾಮಚಂದ್ರ ಮೂರ್ತಿಯ ಚರಣ ಕಮಲಗಳನ್ನು ಸ್ಥಾಪಿಸಿಕೊಂಡು ಯಾವಾತನು ಮೈಮರೆತು ಧ್ಯಾನಪರನಾಗುವನೋ ಆತನೇ ಧನ್ಯಜೀವಿ. ಆತನೇ ಕೃತ ಕೃತ್ಯನೆನಿಸುವನು.

## ರಾಗ - ಶ್ರೀ - ಆದಿ

ಪಲ್ಲವಿ

; , ಸನ್ರಿಸರೀರೀ ರಿಸಾರಿಗಾ ರಿಸಾ । ; ರಿಸನ್ರಿಸಾನ್ರಿ ಸರೀ । ಪಾ ಪನ್ರಿಸರಿಗಾ

. .ನಾ.ಮ ಕುಸುಮ . . ಮುಲ । . ನಾ. . . ಮಕು । ಸು ಮ . . . ।

ರಿಸಾ ॥

ಮುಲ ॥

3. ; ರಿಸನ್ರಿಸಾನ್ರಿ ಸರಿಮಪನಿ ಪಮರೀರಿ ರಿಗ । ರಿಸ ರಿಸನಿಸಾನ್ರಿ ಸರಿಮ ।

ನಾ . . ಮಕು . ಸು ಮ . . ಮುಲ. । . . ನಾ . ಮಕು. ।

ಪನಿಸನಿಪಮರೀ ರಿರಿರಿಗ ॥

ಸು .. ಮ. . . ಮುಲ. ॥

ರಿಸ x ರಿಸನ್ರಿಸಾನ್ರಿಸ ರಿಮಪನಿಸರಿಗರಿ ಸನಿಪಮರೀ ರಿರಿಗ। ರಿಸ ನ್ರಿಸರೀಗರಿಸಾ ।

. . x ನಾ . . ಮ ಕು . ಸು . ಮ . . . ಮುಲ.। . . ಚೆ.ಪೂ. . . ।

ನ್ರಿಸನ್ರಿರಿಸನ್ರಿಪಾ ನ್ರೀಸಾ॥

ಜಿಂ . . . . . ಚೆ ॥

; ನ್ರಿಸರೀಮರಿ ಮಾಪಮ ಪಾ ; । ; ನಿಪಾಪಮಾ । ಮಾ, ಪಮಪಾಮರೀ ರಿಗ ॥

ನರಜ . . ನ್ಮ ಮೇ . ಜ । . ನ್ಮಮುಮನ । ಸಾ. . . . . . . ॥

ರಿಸ x

.. x ನಾಮ ಕುಸುಮಮುಲ ಕಡೇ ಸಂಗತಿ

; ನ್ರಿಸರಿಮಪಾ ಪನಿಸಾ ಸರಿಗಗ । ರಿಸ ನಿಸರಿ ರಿಸನಿ । ಪಾ, ನಿನಿಸಾನಿ

ನರಜ . . ನ್ಮ . . ಮೇ..ಜ। . . ನ್ಮ . . ಮು . । ಮ. ನ . .

ಪಮರೀಗ ॥

ಸಾ . . . ॥

ರಿಸ x

. . x ನಾಮ ಕುಸುಮಮುಲ 2ನೇ ಸಂಗತಿ.

